ಕರ್ನಾಟಕ ಅರೆಭಾಷೆ
ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

# ಅರೆಭಾಷೆ ಅಕಾಡೆಮಿ ಸಾಧನೆಯ ಹಾದಿ....

**15.10.2019 ರಿಂದ 14.10.2022 ರ ಅವಧಿಯ ಚಟುವಟಿಕೆಗಳು**



ಲಕ್ಷ್ಮೀನಾರಾಯಣ ಕಜೆಗದ್ದೆ
ಅಧ್ಯಕ್ಷರು




**ಸದಸ್ಯರು**


ಬೈತಡ್ಕ ಜಾನಕಿ ಬೆಳ್ಯಪ್ಪ


ಸ್ಮಿತಾ ಅಮೃತರಾಜ್


ಚೊಕ್ಕಾಡಿ ಪ್ರೇಮ ರಾಘವಯ್ಯ


ಧನಂಜಯ ಅಗೋಳಿಕಜೆ


ದಂಬೆಕೋಡಿ ಯಸ್. ಆನಂದ


ಡಾ. ದಯಾನಂದ ಕೆ. ಸಿ.
ಕೂಡಕಂಡಿ


ಕುಸುಮಾಧರ ಎ.ಟಿ


ಡಾ. ವಿಶ್ವನಾಥ ಬದಿಕಾನ


ಜಯಪ್ರಕಾಶ್
ಮೋಂಟಡ್ಕ ಬಿಳಿನೆಲೆ


ಪುರುಷೋತ್ತಮ ಕಿರ್ಲಾಯ


ಡಾ. ಪುರುಷೋತ್ತಮ ಕೆ.ವಿ.
ಕರಂಗಲ್ಲು


ಕಿರಣ್ ಕುಂಬಳಚೇರಿ


ಭರತೇಶ ಅಲಸಂಡೆಮಜಲು

# 2019-2022 ವರೆಗೆ ಪ್ರಕಟಿತ ಪುಸ್ತಕಗಳು

| | | |
|---|---|---|
| ಗಂಗಾವತರಣ – ಭೀಷ್ಮೋದಯ | ಪ್ರೊ. ಕೆ ಕುಶಾಲಪ್ಪ ಗೌಡ | ಅರೆಭಾಷೆ ಕವನ ಸಂಕಲನ |
| ಮುತ್ತುಮಣಿ | ಕಣಜಾಲ್ ಪೂವಯ್ಯ | ಅರೆಭಾಷೆ ಕವನ ಸಂಕಲನ |
| ಬಲೀಂದ್ರ ಸಂಧಿ | ಕುಂಞೇಟಿ ಶಿವರಾಮ ಗೌಡ | ಅರೆಭಾಷೆ ಕವನ ಸಂಕಲನ |
| ಯಾಕೀಕತೆ ಹೀಂಗಾತ್? | ಕುತ್ಯಾಳ ನಾಗಪ್ಪ ಗೌಡ | ಅರೆಭಾಷೆ ಕವನ ಸಂಕಲನ |
| ಅಟ್ಟಿ | ಕೊಟ್ಟಕೇರಿಯನ ಲೀಲಾ ದಯಾನಂದ | ಅರೆಭಾಷೆ ಪ್ರಂಬಂಧ ಸಂಕಲನ |
| ಅರೆಭಾಷೆ ಗಾದೆಗ | ತೆಕ್ಕಡೆ ಬಿ. ಕುಮಾರಸ್ವಾಮಿ | ಅರೆಭಾಷೆಗಾದೆಗ |
| ಚೆಂಚಿ | ಬಾರಿಯಂಡ ಜೋಯಪ್ಪ | ಅರೆಭಾಷೆ ಪ್ರಂಬಂಧ ಸಂಕಲನ |
| ಪಾರಂಪರಿಕ ವಸ್ತುಕೋಶ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ |
| ಯಕ್ಷಜೊಂಪೆ | ಭವ್ಯಶ್ರೀ ಕುಲ್ಕುಂದ | ಅರೆಭಾಷೆ ಯಕ್ಷಗಾನ ಪ್ರಸಂಗ |
| ಗೂಡೆ ಬೇಕಾಗುಟ್ಟು | ಪಿ.ಜಿ. ಅಂಬೆಕಲ್ | ಅರೆಭಾಷೆ ನಾಟಕ ಸಂಕಲನ |
| ನೆಂಪುನ ಒರ್ತೆ | ದಾಮೋದರ ಕುಯಿಂತೋಡು | ಅರೆಭಾಷೆ ಪ್ರವಾಸಕತನ |
| ವೀರಮಣಿ ಕಾಳಗ | ಡಾ. ಮಾಧವ ಪೆರಾಜೆ | ಅರೆಭಾಷೆ ಯಕ್ಷಗಾನ ಪ್ರಸಂಗ |
| ಸಾಹೇಬ್ರು ಬಂದವೇ | ಜಯಪ್ರಕಾಶ್ ಕುಕ್ಕೇಟಿ | ಅರೆಭಾಷೆ ನಾಟಕ ಪ್ರಸಂಗ |
| ಕಥೆಗಳ ಅಟ್ಟುಳಿ | ಭವಾನಿಶಂಕರ್ ಅಡ್ತಲೆ | ಅರೆಭಾಷೆ ಜಾನಪದಕತೆ |
| ಕಿರಗೂರಿನ ಗಯ್ಯಾಳಿಗ | ದೇವಜನ ಗೀತಾ ಮೋಂಟಡ್ಕ | ಅರೆಭಾಷೆ ನಾಟಕ ಪ್ರಸಂಗ |
| ಅರೆಭಾಷೆ ಪದಕೋಶ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ |
| ಅರೆಭಾಷೆ ವಿಶ್ವಕೋಶ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ |
| ಗ್ರಾಂಥಿಕ ಕನ್ನಡ ಮತ್ತೆ ಅರೆಭಾಷೆ ಒಂದು ತೌಲನಿಕ ವ್ಯಾಕರಣ | ಪ್ರೊ. ಕೋಡಿ ಕುಶಾಲಪ್ಪಗೌಡ | ಅರೆಭಾಷೆ ಗೌಡಕನ್ನಡ ವ್ಯಾಕರಣ |
| ಅರೆಬಾಸೆ ಕೈಪಿಡಿ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ |
| ಗೂಡಿಗೆ ಮರಳಿದ ಚಿಲಿಪಿಲಿ | ಕಟ್ರತನ ಲಲಿತಾ ಅಯ್ಯಣ್ಣ | ಅರೆಭಾಷೆ ಕಥಾ ಸಂಕಲನ |
| ಗುಬ್ಬಿಗೂಡುನ ಚಿಪಿಪಿಲಿ | ಲೀಲಾ ದಾಮೋದರ ಕುಂದಲ್ಪಾಡಿ | ಅರೆಭಾಷೆ ಪ್ರಂಬಂಧ ಸಂಕಲನ |
| ಚೆಂಚಿಗಂಟ್–ಅರೆಭಾಷೆ ಪ್ರಬಂದಗ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ | ಅರೆಭಾಷೆ ಪ್ರಂಬಂಧ ಸಂಕಲನ |
| ಕವಿತೆಕದ್ರ್–ಅರೆಭಾಷೆ ಪದ್ಯಗ | ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ | ಅರೆಭಾಷೆ ಕವನ ಸಂಕಲನ |
| ಗುಡ್ಡೆಮನೆ ಅಪ್ಪಯ್ಯ ಗೌಡ | ಪಾಲಾಕ್ಷ ಅಮೆಮನೆ | ಅರೆಭಾಷೆ ಸಾದಕರ ಮಾಲೆ |
| ಕೆದಂಬಾಡಿ ರಾಮಯ್ಯ ಗೌಡ | ಡಾ. ಪೂವಪ್ಪ ಕಣಿಯೂರು | ಅರೆಭಾಷೆ ಸಾದಕರ ಮಾಲೆ |
| ಕುರುಂಜಿ ವೆಂಕಟ್ರಮಣ ಗೌಡ | ಡಾ. ಅನುರಾಧ ಕುರುಂಜಿ | ಅರೆಭಾಷೆ ಸಾದಕರ ಮಾಲೆ |
| ಕಾವೇರಿಮನೆ ಬೋಜಪ್ಪ | ಬಾರಿಯಂಡ ಜೋಯಪ್ಪ | ಅರೆಭಾಷೆ ಸಾದಕರ ಮಾಲೆ |
| ಕೊಳಂಬೆ ಪುಟ್ಟಣ್ಣ ಗೌಡ | ಶೀಲಾವತಿ ಕೊಳಂಬೆ | ಅರೆಭಾಷೆ ಸಾದಕರ ಮಾಲೆ |
| ಪುರುಷೋತ್ತಮ ಬಿಳಿಮಲೆ | ಡಾ. ಪೂವಪ್ಪ ಕಣಿಯೂರು | ಅರೆಭಾಷೆ ಸಾದಕರ ಮಾಲೆ |

# ಸಾಧನೆಯ ಹಾದಿ...

## 2019-2022ರ ವರೆಗಿನ ಚಟುವಟಿಕೆಯ ವರದಿ

ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯವನ್ನು ಸಂವರ್ಧನೆಗೋಸ್ಕರ ಡಿಸೆಂಬರ್ 15, 2011ರಲ್ಲಿ ಹುಟ್ಟಿಕೊಂಡ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ನಾಲ್ಕನೆಯ ಅವಧಿಯ ಕಾರ್ಯಚಟುವಟಿಕೆಗಳ ಪರಿಪೂರ್ಣ ವರದಿ. ಕಳೆದ 36 ತಿಂಗಳಲ್ಲಿ ಹತ್ತು ಹಲವು ಕಾರ್ಯಚಟುವಟಿಕೆಗಳನ್ನು ನಡೆಸಿದ್ದೇವೆ. ಮಹಾಮಾರಿ ಕೊರೋನದ ನಡುವೆಯೂ ಯಾರೊಬ್ಬರಿಗೂ ತೊಂದರೆಯಾಗದಂತೆ ನಿಯಮಗಳನ್ನು ಪಾಲಿಸಿ ಕಾರ್ಯಕ್ರಮಗಳನ್ನು ನಿರಂತರವಾಗಿ ಹಮ್ಮಿಕೊಂಡು ಬಂದಿದೆಯೆಂದು ಹೇಳಲು ಹೆಮ್ಮೆಪಡುತ್ತದೆ.

1. **ಅಕಾಡೆಮಿಯ ದೀರ್ಘ ಯೋಜನೆ :** 2019-2022 ಸಾಲಿನಲ್ಲಿ ಅಕಾಡೆಮಿಯ ಮೊದಲ ಸಭೆಯಲ್ಲಿ ಅಕಾಡೆಮಿಯ ದೀರ್ಘಾವಧಿಯ ಯೋಜನೆಗಳ ಬಗ್ಗೆ ಸರ್ವಸದಸ್ಯರ ಒಪ್ಪಿಗೆ ಪಡೆದು ಅರೆಭಾಷೆ ಪದಕೋಶ, ಅರೆಭಾಷೆ ವಿಶ್ವಕೋಶ, ಅರೆಭಾಷೆ ಪಾರಂಪರಿಕ ಕೋಶವನ್ನು ಮಾಡಲು ತೀರ್ಮಾನ ಮಾಡಿದ್ದೇವು. ಸತತ ಎರಡು ವರುಷಗಳಿಂದ ಈ ಯೋಜನೆಗೆ ಅಕಾಡೆಮಿ ಸದಸ್ಯರನ್ನೇ ಯೋಜನಾ ಸಂಚಾಲಕರನ್ನಾಗಿ ನೇಮಕ ಮಾಡಿ ಮತ್ತು ಆರಂಭದಿಂದ ಈ ವರೆಗೆ ಹಂಚಿಕೆಯಾದ ಎಲ್ಲ ಕೆಲಸವನ್ನು ಸದಸ್ಯರು ಸುಸೂತ್ರವಾಗಿ ನಡೆಸಿಕೊಂಡು ಬಂದಿದ್ದಾರೆ.

2. **ಐ.ಎಸ್.ಬಿ.ಎನ್. ಮಾನ್ಯತೆ :** ಕರ್ನಾಟಕ ಅರೆಭಾಷೆ ಸಂಸ್ಕೃತಿ ಇಮತ್ತು ಸಾಹಿತ್ಯ ಅಕಾಡೆಮಿಯು ಪ್ರಕಟಿಸಿದ ಅರೆಭಾಷೆ ಪಾರಂಪರಿಕ ವಸ್ತುಕೋಶ, ಅರೆಭಾಷೆ ಪದಕೋಶ, ಅರೆಭಾಷೆ ವಿಶ್ವಕೋಶ ಮತ್ತು ಅರೆಬಾಸೆ ಕೈಪಿಡಿ ಈ ನಾಲ್ಕು ಪುಸ್ತಕಗಳಿಗೆ ಐ.ಎಸ್.ಬಿ.ಎನ್. ನಂಬರ್ ದೊರೆತು ಅಂತಾರಾಷ್ಟ್ರೀಯ ಮಾನ್ಯತೆಯೊಂದಿಗೆ ಈ ಪುಸ್ತಕಗಳು ಪ್ರಕಟವಾಗಿದೆ. ಐ.ಎಸ್.ಬಿ.ಎನ್. ಗುಣಮಟ್ಟದಲ್ಲಿ ಪ್ರಕಟವಾಗಿವೆ.

3. **ಅರೆಭಾಷೆ ಸಂಶೋಧನಾ ಕೇಂದ್ರ :** ಅರೆಭಾಷೆ ಸಂಶೋಧನಾ ಕೇಂದ್ರ ಮಂಗಳೂರು ವಿಶ್ವವಿದ್ಯಾಲಯದಲ್ಲಿ ಸ್ಥಾಪನೆ ಆಗಿರುವುದು ನಮ್ಮ ಅವಧಿಯ ದೊಡ್ಡ ಸಾಧನೆ. ಅದಕ್ಕೆ ಎರಡು ಕೋಟಿಯಷ್ಟು ಹಣವನ್ನು ಕರ್ನಾಟಕ ಘನ ಸರ್ಕಾರ ಮೀಸಲಿಟ್ಟಿದ್ದು ಅರೆಭಾಷೆ ಸಮುದಾಯಕ್ಕೆ ಕೊಟ್ಟ ದೊಡ್ಡ ಗೌರವ ಎಂದು ಹೇಳಬಹುದು. ನಮ್ಮ ಅರೆಬಾಷೆ ಮುಂದಿನ ದಿನಗಳಲ್ಲಿ ಬೌದ್ಧಿಕವಾಗಿ ಬೆಳೆಯಲು ಇದು ಸಹಕಾರಿಯಾಗಲಿದೆ.

4. **ಅರೆಭಾಷೆ ಪುಸ್ತಕಗಳ ಡಿಜಿಟಲೀಕರಣ :** ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಅಕಾಡೆಮಿ ಪ್ರಕಟಿತ 38 ಪುಸ್ತಕಗಳು, ಸ್ವಪ್ರಕಟಿತ ಲೇಖಕರ 21 ಪುಸ್ತಕಗಳು, 142 ಕೊಡವ ಸಂಗಾತಿ ಸಂಚಿಕೆಗಳು, 25 ಹಿಂಗಾರ ಪತ್ರಿಕೆಗಳು ಜನರಿಗೆ ಡಿಜಿಟಲ್ ಮಾದರಿಯಲ್ಲಿ ಸಿಗುವಂತೆ ಬಿಡುಗಡೆಗೆ ಆಗಿವೆ.

5. **ಅರೆಭಾಷೆ ಸಾಧಕರ ಡಾಕ್ಯುಮೆಂಟರಿ :** ಮೋಹನ್ ಸೋನಾ, ಎನ್.ಎಸ್. ದೇವಿಪ್ರಸಾದ್, ಕೊಡಗು ಗೌಡ ವಿದ್ಯಾಸಂಘ, ಭಾಷಾವಿಜ್ಞಾನಿ ಪ್ರೊ. ಕೋಡಿ ಕುಶಾಲಪ್ಪ ಗೌಡರ ಬದುಕು ಬರಹದ ಡಾಕ್ಯುಮೆಂಟರಿ ಬಿಡುಗಡೆಯಾಗಿದೆ.

6. **ಅರೆಭಾಷೆ ದಿನಾಚರಣೆ :** ಕರ್ನಾಟಕ ಘನ ಸರಕಾರವು 2011ರ ಡಿಸೆಂಬರ್ 15ರಂದು ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯನ್ನು ಹುಟ್ಟುಹಾಕಿತು. ಸದ್ರಿ ದಿನವನ್ನು ಪ್ರತೀ ವರ್ಷವೂ ಅರೆಭಾಷೆ ದಿನಾಚಣೆಯನ್ನಾಗಿ ಆಚರಿಸಲು ಅರೆಭಾಷೆ ಗೌಡ ಸಮಾಜದ ಮುಖ್ಯಸ್ಥರ ಒಪ್ಪಿಗೆಯನ್ನು ಪಡೆದು ನಾವು ಕಾರ್ಯಪ್ರವೃತ್ತರಾದೆವು. ಆ ಪ್ರಯುಕ್ತ 2020-21ರ ಅರೆಭಾಷೆ ದಿನಾಚರಣೆ ಸಂದರ್ಭದಲ್ಲಿ ಭಾಷಾ ಪ್ರೇಮವನ್ನು ಉದ್ದೀಪಿಸಲು ಅಕಾಡೆಮಿ ಐದು ಕಡೆಗಳಲ್ಲಿ ಮತ್ತು 2021-22ರ ಸಾಲಿನಲ್ಲಿ ರಾಜ್ಯದ 18 ಕಡೆಗಳಲ್ಲಿ ಏಕಕಾಲದಲ್ಲಿ ಅರೆಭಾಷೆ ದಿನಾಚರಣೆ ಕಾರ್ಯಕ್ರಮ ನಡೆಸಲಾಯಿತು.

7. **ವಿಶೇಷ ಅಂಚೆ ಲಕೋಟೆ ಬಿಡುಗಡೆ :** ಭಾರತ ಸ್ವಾತಂತ್ರ್ಯ ಅಮೃತ ಮಹೋತ್ಸವ ಸಂಭ್ರಮದಲ್ಲಿ ಅರೆಭಾಷೆ ಪ್ರದೇಶದ ಅಪ್ರತಿಮ ಹೋರಾಟಗಾರ ಸುಬೇದಾರ ಗುಡ್ಡೆಮನೆ ಅಪ್ಪಯ್ಯಗೌಡ ಪುಣ್ಯಸ್ಮರಣೆ ಪ್ರಯುಕ್ತ 31.10.2021ರಂದು ಅರೆಭಾಷೆ ಅಕಾಡೆಮಿಯು ಅಂಚೆ ಇಲಾಖೆಯವರೊಂದಿಗೆ ಸೇರಿಕೊಂಡು ವಿಶೇಷ ಅಂಚೆ ಲಕೋಟೆ ಬಿಡುಗಡೆ ಮಾಡಲಾಯಿತು.

8. **ಅರೆಭಾಷೆ ಸಾಧಕರ ಮಾಲೆ :** ಅರೆಭಾಷೆ ಸಮುದಾಯದ ಮಧ್ಯೆ ಬಾಳಿ ಬದುಕಿದ ಸಾಧಕರನ್ನು, ಸಂಸ್ಕೃತಿ, ಭಾಷೆ, ಸಾಹಿತ್ಯಕ್ಕೆ ಕೊಡುಗೆ ನೀಡಿದವರನ್ನು ಗುರುತಿಸಿ ಅವರ ಬಗೆಗಿನ ಮಾಹಿತಿಗಳನ್ನು ಸಂಗ್ರಹಿಸಿ ವ್ಯಕ್ತಿ ಪರಿಚಯವಾಗಿ ತಯಾರಿಸಲಾದ ಕೃತಿಗಳು ಅರೆಬಾಸೆ ಸಾದಕರ ಮಾಲೆ. ಸಮಯವಕಾಶ ಮತ್ತು ಆರ್ಥಿಕ ಲಭ್ಯತೆಯನ್ನು ಗಮನದಲ್ಲಿರಿಸಿಕೊಂಡು ಆರಂಭದಲ್ಲಿ 6 ಮಂದಿ ಸಾಧಕರ ಬಗ್ಗೆ ಮಾಹಿತಿಗಳನ್ನು ಸಂಗ್ರಹಿಸಿ ವ್ಯಕ್ತಿ ಪರಿಚಯವಾಗಿ ತಯಾರಿಸಲಾದ ಗುಡ್ಡಮನೆ ಅಪ್ಪಯ್ಯಗೌಡ, ಕೆದಂಬಾಡಿ ರಾಮಯ್ಯಗೌಡ, ಕೊಳಂಬೆ ಪುಟ್ಟಣ್ಣ ಗೌಡ, ಕುರುಂಜಿ ವೆಂಕಟರಮಣ ಗೌಡ, ಕಾವೇರಿ ಮನೆ ಬೋಜಪ್ಪ, ಪುರುಷೋತ್ತಮ ಬಿಳಿಮಲೆ ಕೃತಿಗಳು ಅರೆಬಾಸೆ ಸಾಧಕರ ಮಾಲೆ ಪುಸ್ತಕವಾಗಿ ಪ್ರಕಟವಾಗಿವೆ.

9. **ಅರೆಭಾಷೆ ಸೃಜನಶೀಲ ಬರವಣಿಗೆ ಸ್ಪರ್ಧೆ ಮತ್ತು ಪುಸ್ತಕ ಪ್ರಕಟಣೆ :** ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮೂರು ವರ್ಷಗಳಲ್ಲಿ ಅರೆಭಾಷೆ ಸಾಹಿತ್ಯಾಸಕ್ತರು, ಉದಯೋನ್ಮುಕ ಬರಹಗಾರರು ಬರವಣಿಗೆ ಸೃಜನಶೀಲ ಸಾಹಿತ್ಯ ಪ್ರಕಾರಗಳಲ್ಲಿ ಬರವಣಿಗೆ ಮಾಡಬೇಕೆಂಬ ಇರಾದೆಯಿಂದ ಹಲವು ಸ್ಪರ್ಧೆಗಳನ್ನು ಆಯೋಜಿಸಿ, ಅದರಲ್ಲಿ ಬಹುಮಾನಗಳಿಸಿದ ಮತ್ತು ಮೆಚ್ಚುಗೆಗೆ ಪಾತ್ರವಾದ ಕತೆ, ಕವನ, ಲಲಿತ ಪ್ರಬಂಧಗಳನ್ನು ಸಂಪಾದಿಸಿ ಬೇರೆ ಬೇರೆ ಪುಸ್ತಕಗಳಾಗಿ ಬಿಡುಗಡೆ ಮಾಡಿರುತ್ತೇವೆ.

10. **ಅರೆಭಾಷೆ ಚಲನಚಿತ್ರಗಳಿಗೆ ಸಹಾಯಧನ :** ಕರ್ನಾಟಕ ರಾಜ್ಯ ಚಲನಚಿತ್ರ ಪ್ರಶಸ್ತಿ ಮತ್ತು ಗುಣಾತ್ಮಕ ಚಲನಚಿತ್ರಗಳ ಸಹಾಯಧನಕ್ಕೆ ಅರೆಭಾಷೆಯನ್ನು ಪರಿಗಣಿಸುವ ಬಗೆಗೆ ಮತ್ತು ಅರೆಭಾಷೆಯನ್ನು ಪಟ್ಟಿಯಲ್ಲಿ ಸೇರಿಸಲು ಕೆಲಸ ಮಾಡಿದ್ದು. ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಾದ ಅಯುಕ್ತರು, ಕರ್ನಾಟಕ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಪತ್ರ ವ್ಯವಹಾರ ಮತ್ತು ಬೇಕಾದ ದಾಖಲೆಗಳನ್ನು ಸಲ್ಲಿಸಿದ್ದೇವೆ.

11. **ಅರೆಭಾಷೆ ಸಂಸ್ಕೃತಿ ಗ್ರಾಮ :** ಅರೆಭಾಷೆ ಸಂಸ್ಕೃತಿ ಗ್ರಾಮವನ್ನು ಸುಳ್ಯದಲ್ಲಿ ಮಾಡುವ ನಿಟ್ಟಿನಲ್ಲಿ ಹಲವು ಹಂತದ ಮಾತುಕತೆ ಡೀಮ್ಡ್ ಪಾರೆಸ್ಟ್ ಕಾರಣದಿಂದ ಕೆಲಸ ವಿಳಂಬವಾಗಿರುತ್ತದೆ. ಮುಂದಿನ ದಿನಗಳಲ್ಲಿ ಅಕಾಡೆಮಿ ಮಾಡಬಹುದಾದ ಒಂದು ಮಹತ್ವಾಕಾಂಕ್ಷಿ ಯೋಜನೆ.

12. **ರಂಗಭೂಮಿ ಚಟುವಟಿಕೆ :** ರಾಜ್ಯದ ಪ್ರತಿಭಾವಂತರು ಮತ್ತು ಅರೆಭಾಷೆ ಬಲ್ಲವರಾದ ಜೀವನ್‌ರಾಮ್ ಸುಳ್ಯ ಅವರ ನಿರ್ದೇಶನದಲ್ಲಿ 'ಸಾಹೇಬರು ಬಂದವೇ' ಎಂಬ ನಾಟಕವನ್ನು ತಯಾರಿಸಲಾಯಿತು. ಕೊರೋನಾದ ಮಧ್ಯೆ ಎರಡೆರಡು ಬಾರಿ ನಟರನ್ನು ಒಗ್ಗೂಡಿಸುವ ಸವಾಲನ್ನು ಎದುರಿಸಿಕೊಂಡು 76 ದಿನಗಳ ತರಬೇತಿಯನ್ನು ನೀಡಿ ರಾಜ್ಯದಾದ್ಯಂತ 16 ಯಶಸ್ವಿ ತಿರುಗಾಟ ಪ್ರದರ್ಶನವನ್ನು ಮಾಡಲಾಯಿತು. ಇದು ಒಟ್ಟು ಕರ್ನಾಟಕ ರಾಜ್ಯದ 7000 ಕ್ಕಿಂತ ಹೆಚ್ಚು ಜನರನ್ನು ತಲುಪಿದೆ. ಮಂಗಳೂರು ವಿಶ್ವವಿದ್ಯಾನಿಲಯ ವ್ಯಾಪ್ತಿಯ ಅತೀ ಹಳೆಯ ಕಾಲೇಜು ರಂಗಭೂಮಿ ಘಟಕವೆಂದು ಗುರುತಿಸಲ್ಪಾಡುವ ಕುಕ್ಕೆ ಸುಬ್ರಹ್ಮಣ್ಯೇಶ್ವರ ಕಾಲೇಜಿನ ಕುಸುಮ ಸಾರಂಗ ರಂಗಘಟಕಕ್ಕೆ ಸುಳ್ಯ ತಾಲೂಕಿನ ಇನ್ನೋರ್ವ ಪ್ರತಿಭೆ ಎನ್.ಎಸ್.ಡಿ.(ಓಚಿಣುಂಟಿಚಿಟ ಖಿಛಿಂಟ ಠಜಿ ಆಡಿಚಿಟಚಿ) ಇದರ ಪದವೀಧರ ಶ್ರೀ ಪ್ರವೀಣ ಎಡಮಂಗಲ ಇವರ ಮೂಲಕ ಹೊತ್ತ್‌ಕಂತ್‌ಕನ ನಾಟಕವನ್ನು ನಿರ್ದೇಶಿಸಿ ಕಾಲೇಜು ವಿದ್ಯಾರ್ಥಿಗಳನ್ನೂ ಕೂಡ ಅರೆಭಾಷೆ ರಂಗಭೂಮಿ ಚಟುವಟಿಕೆಗೆ ಕರೆತರುವ ಪ್ರಯತ್ನ ಮಾಡಲಾಗಿದೆ. ಈ ರಂಗ ಶಿಬಿರದಲ್ಲಿ 34 ವಿದ್ಯಾರ್ಥಿಗಳು ಭಾಗವಹಿಸಿದ್ದರು. ಈ ಮೂಲಕ ಅರೆಭಾಷೆ ರಂಗಭೂಮಿಗೆ ಭದ್ರ ಬುನಾದಿಯನ್ನು ಈ ಸಂದರ್ಭದಲ್ಲಿ ಹಾಕಲಾಗಿದೆ.

13. **ಅರೆಭಾಷೆ ಯಕ್ಷಗಾನ ಮತ್ತು ತಾಳಮದ್ದಲೆ ಕೃತಿ ರಚನೆ :** ಯಕ್ಷಗಾನ ಕಲಾವಿದೆ ಶ್ರೀಮತಿ ಭವ್ಯಶ್ರೀ ಕುಲ್ಕುಂದ ಮತ್ತು ಹಂಪಿ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ. ಮಾಧವ ಪೆರಾಜೆ ಇವರು ಸಂಪೂರ್ಣ ಅರೆಭಾಷೆ ಯಕ್ಷಗಾನ ಪ್ರಸಂಗ ರಚಿಸಿದ್ದು ಅರೆಭಾಷೆ ಇತಿಹಾಸದಲ್ಲಿ ಇದೇ ಮೊದಲು ಜೊತೆಗೆ ಪೂರ್ಣ ಪ್ರಮಾಣದ ಅರೆಭಾಷೆ ಯಕ್ಷಗಾನ ಪ್ರದರ್ಶನವು ಈ ಸಂದರ್ಭದಲ್ಲಿ ಮೊದಲ ಬಾರಿಗೆ ಪ್ರಯೋಗಗೊಂಡದ್ದು ಅಕಾಡೆಮಿಗೆ ಮತ್ತು ಅರೆಭಾಷಿಗರಿಗೆ ಹೆಮ್ಮೆಯ ಸಂಗತಿ. ಸಾಮಾಜಿಕ ಜಾಲತಾಣಗಳಲ್ಲಿ ಅರೆಭಾಷೆ ಯಕ್ಷಗಾನ ಮತ್ತು ತಾಳಮದ್ದಲೆಯನ್ನು ವೀಕ್ಷಿಸಿದ ನಾಡಿನ ಮತ್ತು ಹೊರನಾಡಿನ ಹಾಗೂ ಹೊರದೇಶದ ಯಕ್ಷಪ್ರೇಯರು ಯಕ್ಷಗಾನ ಕಲಾವಿದರನ್ನು ಸಂಪರ್ಕಿಸಿ ಈ ಭಾಷೆಯನ್ನಾಡುವ ಜನರ ಬಗ್ಗೆ, ವಾಸಿಸುವ ಭೌಗೋಳಿಕ ಪ್ರದೇಶದ ಬಗ್ಗೆ ವಿಚಾರಿಸಿ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

14. **ಅರೆಭಾಷೆ ಸುಗಮ ಸಂಗೀತ :** ಅರೆಭಾಷೆ ಕವಿಗಳ ಹಾಡುಗಳು ಸುಗಮ ಸಂಗೀತ ರೂಪದಲ್ಲಿ ಜನರ ಬಳಿ ತಲುಪಲು ಈ ಯೋಜನೆ ಹಮ್ಮಿಕೊಳ್ಳಲಾಗಿದೆ. ದ.ಕ. ಜಿಲ್ಲೆಯ ಸುಪ್ರಸಿದ್ಧ ಗಾಯಕ ಮತ್ತು ವಿಶ್ರಾಂತ ಪ್ರಾಂಶುಪಾಲರಾದ ಶ್ರೀ ಕೆ.ಆರ್. ಗೋಪಾಲಕೃಷ್ಣ ಸುಳ್ಯ ಇವರ ಮೂಲಕ ಅರೆಭಾಷೆ ಹಾಡುಗಳಿಗೆ ರಾಗ ಸಂಯೋಜಿಸಿ ಧ್ವನಿ ಮುದ್ರಿಸಿ ಜೊತೆಗೆ ಎರಡು ಹಾಡುಗಳಿಗೆ ದೃಶ್ಯಗಳನ್ನು ಅಳವಡಿಸಿ ಸಾಮಾಜಿಕ ಜಾಲತಾಣದಲ್ಲಿ ಹಂಚಿಕೊಳ್ಳಲಾಗಿದೆ. ಈ ಮೂಲಕ ಎಷ್ಟೋ ವರುಷಗಳಿಂದ ಪುಸ್ತಕದಲ್ಲೇ ಇದ್ದ ಹಾಡುಗಳು ಅರೆಭಾಷಿಗರು ಗುನುಗುಣಿಸುವಂತೆ ಮಾಡಿದೆ ಹಾಗೂ ಈ ಯೋಜನೆ ಅರೆಭಾಷೆ ಕವಿಗಳಿಗೆ ತುಂಬ ಉತ್ತೇಜನವನ್ನು ನೀಡಿದೆ.

15. **ಅರೆಭಾಷೆ ಸುಪ್ರಭಾತ ಮತ್ತು ಸೋಬಾನೆ ಧ್ವನಿಮುದ್ರಣ :** ಅರೆಭಾಷೆಯಲ್ಲಿ ಸುಪ್ರಭಾತ ಮತ್ತು ಸೋಬಾನೆಗಳನ್ನು ಮುಂದಿನ ತಲೆಮಾರಿಗೆ ಕಲಿಕಾ ದೃಷ್ಟಿಯಿಂದ ಧ್ವನಿಮುದ್ರಿಸಲಾಗಿದೆ.

16. **ಅರೆಭಾಷೆ ಸಾಹಿತ್ಯ ಸಮ್ಮೇಳನ :** 2019 ಆಲೂರು ಸಿದ್ಧಾಪುರದಲ್ಲಿ ಅರೆಭಾಷೆಯ 2 ನೇಯ ಸಾಹಿತ್ಯ ಸಮ್ಮೇಳನವನ್ನು ನಡೆಸಲಾಯಿತು. ಈ ಸಮ್ಮೇಳನದಲ್ಲಿ ದಾಖಲೆಯ 4000 ಕ್ಕಿಂತ ಹೆಚ್ಚು ಮಂದಿ ಅರೆಭಾಷಿಗರು ಭಾಗವಹಿಸಿರುವರು.

17. **ಕಾರ್ಯಾಗಾರಗಳು :** ಪದಕೋಶ ತಯಾರಿಗೆ ಆರಂಭದಲ್ಲಿ ಮೂರು ಕಾರ್ಯಾಗಾರ ಮತ್ತು ವಿಶ್ವಕೋಶ ತಯಾರಿಗೆ ಎರಡು ಕಾರ್ಯಾಗಾರವನ್ನು ಹಮ್ಮಿಕೊಂಡು ಅರೆಭಾಷೆ ಪ್ರದೇಶದ ಹಿರಿಯರ ಬರಹಗಾರರ ಸಲಹೆ ಸೂಚನೆಗಳನ್ನು ಪಡೆಯಲಾಗಿದೆ.

18. **ಅಂತರ್ಜಾಲದಲ್ಲಿ ಸರಣಿ ಉಪನ್ಯಾಸ :** 1837ರ ಸ್ವಾತಂತ್ರ್ಯ ಹೋರಾಟದ ನೆನಪಿನಲ್ಲಿ ಅಂತರ್ಜಾಲದ ಮೂಲಕ ಸರಣಿ ಉಪನ್ಯಾಸ ಮತ್ತು ಸಭಾ ಕಾರ್ಯಕ್ರಮಗಳನ್ನು ನಡೆಸಿದೆ.

19. **ಅಕಾಡೆಮಿಯ ಸಾಹಿತ್ಯ ಚಟುವಟಿಕೆಗಳು :** ನಮ್ಮ ಈ ಅವಧಿಯಲ್ಲಿ ವ್ಯಾಕರಣ, ಸಂಶೋಧನೆ, ನಾಟಕ, ಯಕ್ಷಗಾನ, ಗಾದೆ, ಕತೆ, ಕವನ, ಲಲಿತ ಪ್ರಬಂಧ, ಪ್ರವಾಸ ಕಥನ, ಪದಕೋಶ, ವಿಶ್ವಕೋಶ ಮತ್ತು ಪಾರಂಪರಿಕ ವಸ್ತುಕೋಶ ಹೀಗೆ ಸಾಹಿತ್ಯ, ಸಂಶೋಧನೆಯ ಎಲ್ಲ ಪ್ರಕಾರಗಳಲ್ಲಿ ಅರೆಭಾಷೆ ವಿದ್ವಾಂಸರುಗಳಿಂದ ಮತ್ತೆ ಸಾಹಿತಿಗಳೊಂದಿಗೆ ಪುಸ್ತಕಗಳನ್ನು ಬರೆಯಿಸಿ ಮುದ್ರಿಸಿ ಅರೆಭಾಷೆ ಸಾಹಿತ್ಯದ ಸಾರಸ್ವತ ಲೋಕಕ್ಕೆ ಕೊಟ್ಟಿದ್ದೇವೆ.

20. **ಅರೆಭಾಷೆ ಫೆಲೊಶಿಪ್ ಯೋಜನೆ :** ಹಿಂದಿನ ಅವಧಿಯ 10 ಫೆಲೋಶಿಪ್‌ಗಳಲ್ಲಿ 9 ಫೇಲೋಶಿಪ್‌ಗಳನ್ನು ನಮ್ಮ ಅವಧಿಯಲ್ಲಿ ಪೂರ್ಣ ಮಾಡಲಾಯಿತು. ಪ್ರಸ್ತುತ ಸಾಲಿನಲ್ಲಿ 2 ಫೆಲೋಶಿಪ್ ನೀಡಿ ಸಂಶೋಧಕರು ಪೂರ್ಣಗೊಳಿಸಿರುತ್ತಾರೆ.

21. **ಅಕಾಡೆಮಿಯ ಸಂಸ್ಕೃತಿ ಶಿಬಿರಗಳು :** ದಕ್ಷಿಣಕನ್ನಡ ಜಿಲ್ಲೆಯ ಸುಳ್ಯ, ಕಡಬ ತಾಲೂಕುಗಳಲ್ಲಿ ಮತ್ತು ಕೊಡಗು ಜಿಲ್ಲೆಯ ಮಡಿಕೇರಿ, ಸೋಮವಾರಪೇಟೆ, ವಿರಾಜಪೇಟೆ ತಾಲೂಕಿನಲ್ಲಿ, ಪಿರಿಯಾಪಟ್ಟಣ, ಮೈಸೂರು, ಬೆಂಗಳೂರಿನ ಗೌಡ ಸಮುದಾಯದ ಸಂಘಟನೆಯೊಂದಿಗೆ ಸೇರಿಕೊಂಡು 15 ಸಂಸ್ಕೃತಿ ಶಿಬಿರವನ್ನು ಆಯೋಜಿಸಲಾಯಿತು. 800 ಕ್ಕೂ ಹೆಚ್ಚು ಜನರು ಈ ಶಿಬಿರಗಳಲ್ಲಿ ಭಾಗವಹಿಸಿರುವರು. ಒಟ್ಟು 60ಕ್ಕಿಂತ ಹೆಚ್ಚು ಮಂದಿ ಸ್ಥಳೀಯರು ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿರುತ್ತಾರೆ. ಒಟ್ಟಾಗಿ 50 ದಿನಗಳ ಶಿಬಿರವಾಗಿ ಮೂಡಿಬಂದಿದೆ.

22. **ದಶವರ್ಷದ ಸಂಭ್ರಮ :** ಆಗಸ್ಟ್ 27, 2021ರಂದು ದಶವರ್ಷದ ಸಂಭ್ರಮ ಪ್ರಯುಕ್ತ ಮಡಿಕೇರಿಯಲ್ಲಿ ವಿವಿಧ ಕಾರ್ಯಕ್ರಮಗಳಿಗೆ ಚಾಲನೆ ನೀಡಲಾಯಿತು. ವರ್ಷಪೂರ್ತಿ ವಿವಿಧ ಕ್ಷೇತ್ರಗಳಲ್ಲಿ ಕಾರ್ಯಕ್ರಮವನ್ನು ಆಯೋಜಿಸಲಾಯಿತು. ಆಗಸ್ಟ್ 29, 2022ರಂದು ದಶವರ್ಷದ ಸಂಭ್ರಮದ ಸಮಾರೋಪ ಕಾರ್ಯಕ್ರಮ ಮಾಡಲಾಯಿತು.

23. **ಹೊಸ ತಲೆಮಾರಿಗೆ ಅರೆಭಾಷೆ :** ಹೊಸ ತಲೆಮಾರಿನ ಲೇಖಕರ ತಯಾರಿಗೆ ಕಾಲೇಜು ವಿದ್ಯಾರ್ಥಿಗಳಿಗೆ ಎರಡು ಕಾರ್ಯಾಗಾರವನ್ನು ಲೇಖಕ ವಸುದೇಂದ್ರರ ಮಾರ್ಗದರ್ಶನದಲ್ಲಿ – ಕೆ.ಎಸ್.ಎಸ್. ಕಾಲೇಜು ಸುಬ್ರಹ್ಮಣ್ಯ ಮತ್ತು ಫೀಲ್ಡ್‌ಮಾರ್ಷಲ್ ಕಾರ್ಯಪ್ಪ ಕಾಲೇಜು ಮಡಿಕೇರಿಯಲ್ಲಿ ನಡೆಸಲಾಯಿತು.

24. **ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂವರ್ಧನೆ ಸಮಿತಿ ರಚನೆ :** ಸುಳ್ಯ ತಾಲೂಕಿನ ಗ್ರಾಮ ಗ್ರಾಮಗಳಲ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಚಟುವಟಿಕೆಗಳನ್ನು ಮಾಡುವುದಕ್ಕೆ ಈ ಸಮಿತಿಯನ್ನು ರಚಿಸಲಾಯಿತು. ಈ ನೆಲೆಯಲ್ಲಿ ಗ್ರಾಮ ಸಮಿತಿ ಸಂಚಾಲಕ, ಸಹ–ಸಂಚಾಲಕರ ಸಭೆಯನ್ನು ತಾಲೂಕು ಮಟ್ಟದಲ್ಲಿ ನಡೆಸಲಾಯಿತು.

25. **ಮೂರು ಕಾಲೇಜುಗಳಲ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ :** ದ.ಕ. ಜಿಲ್ಲೆಯ ಕಡಬ ತಾಲೂಕಿನ ಸುಬ್ರಹ್ಮಣ್ಯದ ಕೆ.ಎಸ್.ಎಸ್. ಪಿ.ಯು. ಕಾಲೇಜು, ಕೆ.ಎಸ್.ಎಸ್. ಪದವಿ ಕಾಲೇಜು, ಮತ್ತು ಸುಳ್ಯ ತಾಲೂಕಿನ ಎನ್.ಎಂ.ಸಿ. ಯಲ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯದ ಪಠ್ಯೇತರ ಚಟುವಟಿಕೆಯ ಸಂಘವನ್ನು ತಯಾರಿಸಲಾಗಿದೆ.

26. **ವಾದ್ಯಪರಿಕರಗಳ ವಿತರಣೆ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶನದಂತೆ ವಿಶೇಷ ಘಟಕಗಳ ಯೋಜನೆಯಡಿಯಲ್ಲಿ ಮಡಿಕೇರಿ ಮತ್ತು ಸುಳ್ಯದಲ್ಲಿ ತಳ ಸಮುದಾಯಗಳನ್ನು ಆಯ್ಕೆಮಾಡಿ ವಾದ್ಯಪರಿಕರಗಳನ್ನು ವಿತರಣೆ ಮಾಡಲಾಗಿದೆ.

27. **ರಾಜ್ಯೋತ್ಸವ ಪ್ರಯುಕ್ತ ಕನ್ನಡ ಸಿನಿಮಾ ಪ್ರದರ್ಶನ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶನದಂತೆ ರಾಜ್ಯೋತ್ಸವ ಪ್ರಯುಕ್ತ ಒಂದು ವಾರಗಳ ಸಿನಿಮಾ ಪ್ರದರ್ಶನವನ್ನು ಮಂಗಳೂರು, ಮಡಿಕೇರಿ, ಸುಳ್ಯದಲ್ಲಿ ನಡೆಸಲಾಗಿದೆ.

28. **ಹೊಸ ಚಂದಾದಾರರ ಸೇರ್ಪಡೆ :** ಅರೆಭಾಷೆ ತ್ರೈಮಾಸಿಕ ಪತ್ರಿಕೆ ಹಿಂಗಾರದ ಚಂದಾದಾರರು ನಮ್ಮ ಅವಧಿಯವರೆಗೆ 893 ಸದಸ್ಯರಿದ್ದರು. ಈಗ ಅದು 1679ಕ್ಕೆ ಏರಿಕೆಯಾಗಿದೆ. ಹಾಗೂ ಮೂರು ತಿಂಗಳೊಂದರಂತೆ ಈಗಾಗಲೇ 12 ಸಂಚಿಕೆಗಳನ್ನು ಕೊರೊನಾದ ಕಠಿಣ ಸಮಯವನ್ನೊಳಗೊಂಡು ಪ್ರಕಟ ಮಾಡಿದ್ದೇವೆ.

29. **ಅರೆಭಾಷಿಗರು ಜನಗಣತಿಯಲ್ಲಿ ಸೇರ್ಪಡೆಗೆ ಪ್ರಯತ್ನ :** ಅರೆಭಾಷೆಗೆ ಭಾರತದ ಜನಗಣತಿಯಲ್ಲಿ ಮಾನ್ಯತೆ ಸಿಗಬೇಕೆಂದು ಆರಂಭದ ಸುತ್ತಿನ ಮಾತುಕತೆಗಳನ್ನು ನಡೆಸಲಾಗಿದೆ. ಕೊರೋನ ಕಾರಣದಿಂದಾಗಿ ಈ ದಿಕ್ಕಿನಲ್ಲಿ ಮುಂದುವರಿಯಲು ಅಸಾಧ್ಯವಾಯಿತು.

30. **ಮಾಧ್ಯಮಗಳಲ್ಲಿ ಅರೆಭಾಷೆ ಚಟುವಟಿಕೆ :** ಅರೆಭಾಷೆ ಪಠ್ಯಪುಸ್ತಕ, ನಾಟಕ, ಡಾಕ್ಯುಮೆಂಟರಿ, ಯಕ್ಷಗಾನ, ತಾಳಮದ್ದಲೆ, ಸುಗಮಸಂಗೀತ, ಗಮಕ, ಚಿತ್ರಕಲಾ ಶಿಬಿರ (7 ದಿನಗಳ ಚಿತ್ರಕಲಾ ಶಿಬಿರ – 10 ಮಂದಿ ಅರೆಭಾಷಿಕರ ಮನೆಯಲ್ಲಿ ವಾಸ್ತವ್ಯ), ಪತ್ರಿಕೆಗಳ ವಿವಿಧ ಲೇಖನಗಳ ತಯಾರಿ, ಇಂಗ್ಲೀಷ್, ಕನ್ನಡ ವಿಕಿಪೀಡಿಯದಲ್ಲಿ ಅರೆಭಾಷೆ ಭಾಷೆ, ಸಂಸ್ಕೃತಿ, ಸಾಹಿತ್ಯದ ಪುಸ್ತಕಗಳ, ಡಿಜಿಟಲ್ ಪುಸ್ತಕಗಳ ಉಲ್ಲೇಖ ಇತ್ಯಾದಿ ತಯಾರಿಸುವ ಚಿಂತನೆಯನ್ನು ನಡೆಸಿ ಸಕ್ರೀಯವಾಗಿ ಕಾರ್ಯಪ್ರವೃತ್ತವಾಗಿದೆ.

31. **ಚಿತ್ರಕಲಾ ಶಿಬಿರ :** ಅರೆಭಾಷೆ ಸಂಸ್ಕೃತಿಯನ್ನು ಕ್ಯಾನ್‌ವಾಸ್ ಮೇಲೆ ಮೂಡಿಸುವುದಕ್ಕೋಸ್ಕರ ಅರೆಭಾಷೆ ಸಂಸ್ಕೃತಿ ಪ್ರಕೃತಿ ಶಿಬಿರ ಹಮ್ಮಿಕೊಳ್ಳಲಾಯಿತು. ಈ ಸಂದರ್ಭದಲ್ಲಿ ರಾಜ್ಯದ ಬೇರೆಬೇರೆ ಭಾಗಗಳಿಂದ 10 ಮಂದಿ ವರ್ಣಚಿತ್ರ ಕಲಾವಿದರು 10 ಮಂದಿ ಅರೆಭಾಷಿಕರ ಮನೆಯಲ್ಲಿ 7 ದಿನಗಳ ವಾಸ್ತವ್ಯ ಹೂಡಿ ಅರೆಭಾಷೆ ಸಂಸ್ಕೃತಿಯನ್ನು ಅಧ್ಯಯನ ಮಾಡಿ ಚಿತ್ರರಚನೆ ಮಾಡಿದರು.

32. **ಅರೆಭಾಷೆಗೆ ಐ.ಎಸ್.ಒ. ಮಾನ್ಯತೆಗಾಗಿ ಪ್ರಯತ್ನ :** ಅರೆಭಾಷೆಗೆ ಐ.ಎಸ್.ಒ. ಮಾನ್ಯತೆ ಸಿಗಬೇಕೆಂಬ ನೆಲೆಯಲ್ಲಿ ಎರಡು ಆನ್‌ಲೈನ್ ಕಾರ್ಯಾಗಾರವನ್ನು ನಡೆಸಿ, ಐ.ಎಸ್.ಒ. ಸಂಸ್ಥೆಯೊಂದಿಗೆ ನಿರಂತರವಾಗಿ ಸಂಪರ್ಕ ಹೊಂದಿದ್ದು, ಕಳೆದ ಒಂದೂವರೆ ವರ್ಷದಿಂದ ಐ.ಎಸ್.ಒ. ಸ್ಥಾನಮಾನಕ್ಕಾಗಿ ಪ್ರಯತ್ನ ಮಾಡಲಾಗಿದೆ. ಭಾಷೆಗೆ ಐ.ಎಸ್.ಒ. (international organization of standardization for Langauge (https://www.loc.gov/standards/iso639-2/php/code_list.php)) ಸ್ಥಾನ ಬರಬೇಕಾದಲ್ಲಿ ಹಲವು ಮಾಧ್ಯಮಗಳಲ್ಲಿ ಸಾಹಿತ್ಯ ರಚನೆಯ ದಾಖಲೆಗಳನ್ನು ಒದಗಿಸಿಕೊಡುವ ನೆಲೆಯಲ್ಲಿ ಅಕಾಡೆಮಿಯು ಕಾರ್ಯಪ್ರವೃತ್ತವಾಗಿದೆ.

33 **ಪುಸ್ತಕ ಪ್ರಕಟಣೆ :** ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ 2019–22ರ ಅವಧಿಯಲ್ಲಿ ಸುಮಾರು 4000ಕ್ಕಿಂತ ಹೆಚ್ಚು ಪುಟಗಳ ಒಟ್ಟು 30 ಪುಸ್ತಕಗಳನ್ನು ಪ್ರಕಟಿಸಿದೆ. 1/4 ಕ್ರೌನ್ ಸೈಟಿನ 3 ಪುಸ್ತಕಗಳು (ಅರಭಾಷೆ ಪದಕೋಶ, ವಿಶ್ವಕೋಶ, ಪಾರಂಪರಿಕ ಕೋಶ). 1/8 ಡೆಮಿ ಸೈಜಿನ 14 ಪುಸ್ತಕಗಳು. 1/8 ಕ್ರೌನ್ ಸೈಜಿನ 13 ಪುಸ್ತಕಗಳಿವೆ.

34. **ವಿಚಾರ ಸಂಕಿರಣ :** 1 ರಾಷ್ಟ್ರೀಯ ವಿಚಾರ ಸಂಕಿರಣ, 8 ಆನ್‌ಲೈನ್ ಉಪನ್ಯಾಸ ಮತ್ತು 10 ವಿಶೇಷ ಉಪನ್ಯಾಸ ಅಯೋಜಿಸಲಾಗಿದೆ.

## 2019-2022ರ ವರೆಗಿನ ಚಟುವಟಿಕೆಗಳು

**1. 25.12.2019** : ಕೆ.ವಿ.ಜಿ. ಸುಳ್ಯ ಹಬ್ಬದಲ್ಲಿ ಎಮ್ಮಮನೆಯಂಗಳದಿ ನಾಟಕ ಪ್ರಾಯೋಜನೆ, ಕೆ.ವಿ.ಜಿ. ಹಬ್ಬ ವೇದಿಕೆ, ಸುಳ್ಯ.

**2. 01.02.2020** : ಕೊಡಗು ಜಿಲ್ಲಾ 14ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ ಪ್ರಾಯೋಜನೆ. ನಿಡ್ತ, ಸೋಮವಾರಪೇಟೆ ತಾಲೂಕು.

**3. 03.02.2020** : ಅರೆಭಾಷೆ ರಂಗ ತರಬೇತಿ ಶಿಬಿರ ಉದ್ಘಾಟನಾ ಸಮಾರಂಭ, ನಾಟಕ 'ಸಾಹೇಬ್ರು ಬಂದವೆ', ನಿರ್ದೇಶನ ಜೀವನ್ ರಾಂ ಸುಳ್ಯ. ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರ ಹಳೆಗೇಟು, ಸುಳ್ಯ. ದ.ಕ.

**4. 17.02.2020** : ಮೈಸೂರು ರಂಗಾಯಣದಲ್ಲಿ ಬಹುರೂಪಿ ಕಾರ್ಯಕ್ರಮ. ಅರೆಭಾಷೆ ಸಾಂಸ್ಕೃತಿಕ ಕಾರ್ಯಕ್ರಮ ಪ್ರಾಯೋಜನೆ ರಂಗಾಯಣ, ಮೈಸೂರು.

**5. 06.02.2020** : ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ, ಸುಬ್ರಹ್ಮಣ್ಯದಲ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ ಉದ್ಘಾಟನಾ ಸಮಾರಂಭ. ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ, ಸುಬ್ರಹ್ಮಣ್ಯ.

**6. 08.02.2020** : ಅರೆಭಾಷೆ ಸಂಸ್ಕೃತಿ ಕೆಡ್ಡಸ ಹಬ್ಬ. ವಿಚಾರ ಮಂಡನೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ. ವಿಷಯ : **ಅರೆಭಾಷೆ ಸಂಸ್ಕೃತಿಲಿ ಕೆಡ್ಡಸ ಹಬ್ಬದ ಮಹತ್ವ** ಸಂಪನ್ಮೂಲ ವ್ಯಕ್ತಿ : ಡಾ. ಕೋರನ ಸರಸ್ವತಿ ಪ್ರಕಾಶ್. ವಿಷಯ : **'ನಮ್ಮ ಊರ್ ನಮ್ಮ ಐನ್ ಮನೆ'** ಸಂಪನ್ಮೂಲ ವ್ಯಕ್ತಿ : ಶ್ರೀ ಪಟ್ಟಡ ಉಲ್ಲಾಸ. ಪಟ್ಟಡ ದೊಡ್ಡಮನೆ ಆವರಣ, ಅವಂದೂರು.

**7. 10.02.2020** : ಅರೆಭಾಷೆ ಸಂಸ್ಕೃತಿ ಗ್ರಾಮ ನಿರ್ಮಾಣಕ್ಕೆ ಸುಳ್ಯ ತಾಲೂಕಿನ ಉಬರಡ್ಕ ಮಿತ್ತೂರು ಗ್ರಾಮದ ಸರ್ವೆ ನಂ. 286೧ ಮತ್ತು 335 ರಲ್ಲಿ ಅರೆಭಾಷೆ ಪಾರಂಪರಿಕ ಗ್ರಾಮದ ಯೋಜನೆಗಾಗಿ ಸ್ಥಳ ಕಾಯ್ದಿರಿಸಲು ಪ್ರಾಥಮಿಕ ಹಂತದ ಸರ್ವೆ ನಡೆಸಿರುವುದು.

**8. 13.02.2020** : ಸುಳ್ಯದಲ್ಲಿ ಅರೆಭಾಷೆ ಸಂಸ್ಕೃತಿ ಗ್ರಾಮ ನಿರ್ಮಾಣದ ಸಲುವಾಗಿ ಸನ್ಮಾನ್ಯ ಶ್ರೀ ಡಿ.ವಿ.ಸದಾನಂದ ಗೌಡ, ಕೇಂದ್ರ ರಾಸಾಯನಿಕ ಮತ್ತು ರಸಗೊಬ್ಬರ ಸಚಿವರ ನೇತೃತ್ವದಲ್ಲಿ ಶಿಗ್ಗಾಂವಿ ಗೋಟಗೋಡಿನ ಉತ್ಸವ್ ರಾಕ್‌ಗಾರ್ಡನ್‌ಗೆ ಭೇಟಿ

**9. 16.02.2020** : ಅರೆಭಾಷೆ ಸಿರಿ ಸಂಸ್ಕೃತಿ ಮತ್ತೆ ಕೆಡ್ಡಸ ಗೌಜಿ. ವಿಷಯ : **ಜನಪದರ ಬದುಕ್‌ಲಿ ಕೆಡ್ಡಸ ಹಬ್ಬ**. ಸಂಪನ್ಮೂಲ ವ್ಯಕ್ತಿ : ಸುಂದರ ಕೇನಾಜೆ. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಕೂಡಡ್ಕ, ಚೆಂಬು.

**10. 23.02.2020** : ಎರಡನೇ ಅರೆಭಾಷೆ ಸಾಹಿತ್ಯ ಸಮ್ಮೇಳನ 2020. ಮೆರವಣಿಗೆ, ವಸ್ತು ಪ್ರದರ್ಶನ, ಪುಸ್ತಕ ಪ್ರದರ್ಶನ, ಅರೆಭಾಷೆ ಸಾಹಿತ್ಯ ವಿಚಾರ ಗೋಷ್ಠಿ, ಅರೆಭಾಷೆ ಹಾಡುಗಳ ಗಾಯನ, ಅರೆಭಾಷೆ ಕವಿಗೋಷ್ಠಿ, ಸನ್ಮಾನ ಸಮಾರಂಭ, ಸಾಂಸ್ಕೃತಿಕ ಕಾರ್ಯಕ್ರಮ. ಆಲೂರು ಸಿದ್ದಾಪುರ, ಸೋಮವಾರಪೇಟೆ.

**11. 14.03.2020** : 40 ದಿನಗಳ ರಾಜ್ಯಮಟ್ಟದ ಅರೆಭಾಷೆ ನಾಟಕ **'ಸಾಹೇಬ್ರು ಬಂದವೆ'** ರಂಗ ಶಿಬಿರ ಸಮಾರೋಪ. ರಂಗಮನೆ, ಸಾಂಸ್ಕೃತಿಕ ಕಲಾಕೇಂದ್ರ ಹಳೆಗೇಟು, ಸುಳ್ಯ, ದ.ಕ.

**12. 13.07.2020** : ಅರೆಭಾಷೆ ಪಠ್ಯಪುಸ್ತಕ ರಚನೆ ಕಮ್ಮಟ. ಡಾ. ಕರುಣಾಕರ ನಿಡಿಂಜಿ ಯವರ ಮನೆ, ಚೆಂಬು.

**13. 18.08.2020** : ಯಕ್ಷಗಾನ ತಾಳಮದ್ದಲೆ. **'ಬಾಣದ ಪಾಲ'** ಧ್ವನಿ ಮುದ್ರಣ ಕಾರ್ಯಕ್ರಮ 'ವಿಕಸನ' ಟಿ.ವಿ. ಸ್ಟುಡಿಯೋ, ಪುತ್ತೂರು. ಯೂಟ್ಯೂಬ್ ಆನ್‌ಲೈನ್‌ನಲ್ಲಿ ಕಾರ್ಯಕ್ರಮ ಪ್ರಸಾರ. https://youtu.be/1pOLEvdAQhQ

**14. 27.09.2020** : ಅರೆಭಾಷೆ ಶಬ್ದಕೋಶ ರಚನಾ ಕಮ್ಮಟ. ಸಂಪನ್ಮೂಲ ವ್ಯಕ್ತಿ : ಪ್ರೊ. ಚೆ. ರಾಮಸ್ವಾಮಿ ಮತ್ತು ಡಾ. ಪದ್ಮನಾಭ ಕೇಕುಣ್ಣಾಯ. ಯುವಜನ ಸಂಯುಕ್ತ ಮಂಡಳಿ, ಸಭಾಂಗಣ, ಸುಳ್ಯ.

**15. 03.10.2020** : ಸನ್ಮಾನ್ಯ ಶ್ರೀ ಡಿ.ವಿ. ಸದಾನಂದ ಗೌಡ, ಕೇಂದ್ರ ರಾಸಾಯನಿಕ ಮತ್ತೆ ರಸಗೊಬ್ಬರ ಸಚಿವರು, ಇವರೊಂದಿಗೆ ಅಕಾಡೆಮಿಯ ಮುಂದಿನ ಯೋಜನೆಗಳ ಬಗ್ಗೆ ಅಧ್ಯಕ್ಷರು ಮತ್ತು ಸದಸ್ಯರ ಜೊತೆ ಮಾತುಕತೆ. ಒಕ್ಕಲಿಗರ ಗೌಡ ಸೇವಾ ಸಂಘ(ರಿ.) ಪುತ್ತೂರು, ದ.ಕ ಜಿಲ್ಲೆ.

**16. 04.10.2020** : ವಿಚಾರ ಸಂಕಿರಣ. ಗೋಷ್ಠಿ 1. ವಿಷಯ : **ಭಾಷಾ ಅಕಾಡೆಮಿಯ ಚಟುವಟಿಕೆಗಳ ಸ್ವರೂಪ ಮತ್ತೆ ಸಾಧ್ಯತೆಗಳು**. ಸಂಪನ್ಮೂಲ ವ್ಯಕ್ತಿ : ಡಾ. ಬಿ.ವಿ. ವಸಂತಕುಮಾರ್, ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ.

ಗೋಷ್ಠಿ 2. ವಿಷಯ : **ಭಾಷೆ ಮತ್ತು ಸಂಸ್ಕೃತಿ ಉಳಿಸುವಲ್ಲಿ ಸಮುದಾಯದ ಪಾತ್ರ**. ಸಂಪನ್ಮೂಲ ವ್ಯಕ್ತಿ : ಶ್ರೀ ನಾಗೇಶ್ ಕುಂದಲ್ಪಾಡಿ, ಅಧ್ಯಕ್ಷರು, ಪೆರಾಜೆ ಪ್ರಾ.ಕೃ.ಪ.ಸ.ಸಂಘ(ನಿ.) ಪೆರಾಜೆ, ಸಹಕಾರ ಭವನ ಪಯಸ್ವಿನಿ ಪ್ರಾ.ಕೃ.ಪ.ಸ.ಸಂಘ(ನಿ.) ಸಂಪಾಜೆ, ಉತ್ತರ ಕೊಡಗು.

**17. 11.10.2020** : ಅರೆಭಾಷೆ ಶಬ್ದಕೋಶ ರಚನಾ ಕಮ್ಮಟ. ಸಂಪನ್ಮೂಲ ವ್ಯಕ್ತಿ : ಪ್ರೊ. ಚೆ. ರಾಮಸ್ವಾಮಿ. ಗೌಡ ಮಹಿಳಾ ಒಕ್ಕೂಟ ಸಭಾಂಗಣ, ಮಡಿಕೇರಿ.

**18. 26.10.2020 :** ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನಪು. ಅಂತರ್ಜಾಲದಲ್ಲಿ ಉಪನ್ಯಾಸ ಮಾಲೆ. ವಿಷಯ 1 : **ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆ.** ಉಪನ್ಯಾಸ : ಡಾ ಮಾಧವ ಪೆರಾಜೆ, ಪ್ರಾಧ್ಯಾಪಕರ್, ದ್ರಾವಿಡ ಸಂಸ್ಕೃತಿ ಅಧ್ಯಾಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. ಯೂಟ್ಯೂಬ್, ಫೇಸ್‌ಬುಕ್. https://youtu.be/Amp1GmtGHTU

**19. 27.10.2020 :** ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನಪು. ಅಂತರ್ಜಾಲದಲ್ಲಿ ಉಪನ್ಯಾಸ ಮಾಲೆ. ವಿಷಯ 2 : **ಕೆದಂಬಾಡಿ ರಾಮಯ್ಯಗೌಡ – ವ್ಯಕ್ತಿಚಿತ್ರಣ.** ಉಪನ್ಯಾಸ : ಡಾ ಪ್ರಭಾಕರ ಶಿಶಿಲ, ವಿಶ್ರಾಂತ ಪ್ರಾಂಶುಪಾಲರು, ನೆಹರು ಸ್ಮಾರಕ ಪದವಿ ಕಾಲೇಜು, ಸುಳ್ಯ. ಯೂಟ್ಯೂಬ್, ಫೇಸ್‌ಬುಕ್. https://youtu.be/wLbNWbzA6C4

**20. 28.10.2020 :** ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನಪು. ಅಂತರ್ಜಾಲದಲ್ಲಿ ಉಪನ್ಯಾಸ ಮಾಲೆ. ವಿಷಯ 3 : **ಗುಡ್ಡೆಮನೆ ಅಪ್ಪಯ್ಯಗೌಡ – ವ್ಯಕ್ತಿಚಿತ್ರಣ.** ಉಪನ್ಯಾಸ : ಡಾ ಕುಶ್ವಂತ್ ಕೋಳಿಬೈಲು, ಮಕ್ಕಳ ತಜ್ಞರ್, ಜಿಲ್ಲಾ ಆಸ್ಪತ್ರೆ ಮಡಿಕೇರಿ. ಯೂಟ್ಯೂಬ್, ಫೇಸ್‌ಬುಕ್. https://youtu.be/JyUjFj0s-J0

**21. 29.10.2020 :** ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನಪು. ಅಂತರ್ಜಾಲದಲ್ಲಿ ಉಪನ್ಯಾಸ ಮಾಲೆ. ವಿಷಯ 4 : **ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟದ ನಂತರದ ದಿನಗಳು.** ಉಪನ್ಯಾಸ : ಅನಿಂದಿತ್ ಕೊಚ್ಚಿ. ಯೂಟ್ಯೂಬ್, ಫೇಸ್‌ಬುಕ್. https://youtu.be/Wkj8cUoiTCk

**22. 30.10.2020 :** ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನಪು ಮಾಡುವ ಕಾರ್ಯಕ್ರಮ. ವಿಷಯ : **ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟ.** ಸಂಪನ್ಮೂಲ : ಡಾ. ವಿಶ್ವನಾಥ ಬದಿಕಾನ. ಎ.ಪಿ.ಎಂ.ಸಿ. ಸಭಾಭವನ, ಸುಳ್ಯ.

**23. 31.10.2020 :** ಸ್ವಾತಂತ್ರ್ಯ ಹೋರಾಟಗಾರ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ಹುತಾತ್ಮ ದಿನಾಚರಣೆ, ಗುಡ್ಡೆಮನೆ ಅಪ್ಪಯ್ಯಗೌಡರ ಸ್ಮಾರಕ ವೃತ್ತ, ಮಡಿಕೇರಿ.

**24. 05.11.2020 :** ಅರೆಭಾಷೆ ನಾಟಕ **'ಸಾಹೇಬ್ರು ಬಂದವೇ'** ರಂಗಶಿಬಿರ ತರಬೇತಿ ಮುಂದುವರಿದ ಭಾಗ. ರಂಗಮನೆ, ಹಳೆಗೇಟು, ಸುಳ್ಯ.

**25. 23.11.2020 ರಿಂದ 29.11.2020ರ ವರೆಗೆ** ಅರೆಭಾಷೆ ಶಬ್ದಕೋಶ ತರಬೇತಿ ಕಾರ್ಯಗಾರ. ಸಂಪನ್ಮೂಲ ವ್ಯಕ್ತಿ : ಪ್ರೊ. ಚೆ. ರಾಮಸ್ವಾಮಿ, ಡಾ. ಕರುಣಾಕರ ನಿಡಿಂಜಿ, ಡಾ. ವಿಶ್ವನಾಥ ಬದಿಕಾನ. ಅರೆಭಾಷೆ ಶಬ್ದಕೋಶ (ನಿಘಂಟು) ರಚನೆ ಕ್ಷೇತ್ರಕಾರ್ಯಕರ್ತರಿಗಾಗಿ 2 ದಿವಸಗಳ ತರಬೇತಿ ಕಾರ್ಯಗಾರ. ಕೊಡಗು ಗೌಡ ಸಮಾಜ, ಮಡಿಕೇರಿ.

**26. 04.12.2020 :** **ಸಾಹೇಬ್ರು ಬಂದವೇ** ನಾಟಕ ಪ್ರದರ್ಶನ. ರಂಗಮನೆ, ಹಳೆಗೇಟು, ಸುಳ್ಯ.

**27. 06.12.2020 :** **ಸಾಹೇಬ್ರು ಬಂದವೇ** ನಾಟಕ ಪ್ರದರ್ಶನ. ರಂಗಮನೆ, ಹಳೆಗೇಟು, ಸುಳ್ಯ.

**28. 11.12.2020 :** ಅರೆಭಾಷೆ ದಿನಾಚರಣೆ ಪ್ರಯುಕ್ತ ಯೂಟ್ಯೂಬ್, ಫೇಸ್‌ಬುಕ್ ಆನ್‌ಲೈನ್ ಸರಣಿ ಉಪನ್ಯಾಸ. ವಿಷಯ 1 : **ಅರೆಭಾಷೆ – ಧ್ವನಿಮಾ ವ್ಯವಸ್ಥೆ.** ಸಂಪನ್ಮೂಲ ವ್ಯಕ್ತಿ : ಪ್ರ. ಕೋಡಿ ಕುಶಾಲಪ್ಪಗೌಡ, ಭಾಷಾ ವಿಜ್ಞಾನಿ ಮತ್ತೆ ವಿಶ್ರಾಂತ ಪ್ರಾಧ್ಯಾಪಕರು ಮದ್ರಾಸ್ ವಿಶ್ವವಿದ್ಯಾಲಯ, ಚೆನ್ನೈ. https://youtu.be/356RiGvoTW0

**29. 12.12.2020 :** ಅರೆಭಾಷೆ ದಿನಾಚರಣೆ ಪ್ರಯುಕ್ತ ಯೂಟ್ಯೂಬ್, ಫೇಸ್‌ಬುಕ್ ಆನ್‌ಲೈನ್ ಸರಣಿ ಉಪನ್ಯಾಸ. ವಿಷಯ 2 : **ಅರೆಭಾಷೆ ಉಳಿಸುವ ಸಾಧ್ಯತೆಗಳು.** ಸಂಪನ್ಮೂಲ ವ್ಯಕ್ತಿ : ಪ್ರೊ. ಪುರುಷೋತ್ತಮ ಬಿಳಿಮಲೆ, ವಿಶ್ರಾಂತ ಪ್ರಾಧ್ಯಾಪಕರು, ಜೆ. ಎನ್. ಯು ವಿಶ್ವವಿದ್ಯಾನಿಲಯ, ದೆಹಲಿ. https://youtu.be/FJ3DkbcyKjM

**30. 13.12.2020 :** ಅರೆಭಾಷೆ ದಿನಾಚರಣೆ ಪ್ರಯುಕ್ತ ಯೂಟ್ಯೂಬ್, ಫೇಸ್‌ಬುಕ್ ಆನ್‌ಲೈನ್ ಸರಣಿ ಉಪನ್ಯಾಸ. ವಿಷಯ 3 : **ಅರೆಭಾಷೆ ಸಂಶೋದನಾ ಸಾಧ್ಯತೆಗಳು.** ಸಂಪನ್ಮೂಲ ವ್ಯಕ್ತಿ : ಡಾ. ಕೋರನ ಸರಸ್ವತಿ, ಸಹ ಪ್ರಾಧ್ಯಾಪಕರು, ಕನ್ನಡ, ಪ್ರಥಮ ದರ್ಜೆ ಮಹಿಳಾ ಕಾಲೇಜು, ಮಡಿಕೇರಿ. https://youtu.be/aWs9Cq2wHTY

**31. 14.12.2020 :** ಅರೆಭಾಷೆ ದಿನಾಚರಣೆ ಪ್ರಯುಕ್ತ ಯೂಟ್ಯೂಬ್, ಫೇಸ್‌ಬುಕ್ ಆನ್‌ಲೈನ್ ಸರಣಿ ಉಪನ್ಯಾಸ. ವಿಷಯ 4 : **ಅರೆಭಾಷೆಯನ್ನು ಬಳಸುವ ನೆಲೆಗಳು ಮತ್ತು ಹಿನ್ನೆಲೆ.** ಸಂಪನ್ಮೂಲ ವ್ಯಕ್ತಿ : ಡಾ. ಲಾವಣ್ಯ ಸಿ.ಪಿ.ಕೊಟ್ಟಕೇರಿಯನ, ಸಹಾಯಕ ಪ್ರಾಧ್ಯಾಪಕರು, ಕನ್ನಡ, ಶೇಷಾದ್ರಿಪುರಂ ಪದವಿ ಕಾಲೇಜು, ಮೈಸೂರು. https://youtu.be/jMXbD29A4yM

**32. 15.12.20 :** ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ ಮತ್ತು ಅರೆಭಾಷೆ ಯಕ್ಷಗಾನ **'ಕಂಸವಧೆ'** ಪ್ರದರ್ಶನ. ಸುಳ್ಯ.

**33. 15.12.2020 :** ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ ಮತ್ತು ಅರೆಭಾಷೆ ಯಕ್ಷಗಾನ ತಾಳಮದ್ದಲೆ **'ಪಂಚವಟಿ'** ಪ್ರದರ್ಶನ. ಭಾರತೀಯ ವಿದ್ಯಾಭವನ, ಮಡಿಕೇರಿ. https://youtu.be/9UsuzfyclOA

**34. 15.12.2020 :** ಅರೆಭಾಷೆ ದಿನಾಚರಣೆ ಪ್ರಯುಕ್ತ ಉಪನ್ಯಾಸ. ವಿಷಯ 1 : **ಅರೆಭಾಷೆ ಬೆಳವಣಿಗೆ.** ಸಂಪನ್ಮೂಲ ವ್ಯಕ್ತಿ : ಡಾ. ವಿಶ್ವನಾಥ ಬದಿಕಾನ. ವಿಷಯ 2 : **ಅರೆಭಾಷೆ ಸಾಹಿತ್ಯ.** ಸಂಪನ್ಮೂಲ ವ್ಯಕ್ತಿ : ಡಾ. ಪುರುಷೋತ್ತಮ ಕೆ.ವಿ.ಕರಂಗಲ್ಲು. ತುಳು ಭವನ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಉರ್ವಸ್ಟೋರ್, ಮಂಗಳೂರು.

**35. 15.12.2020 :** ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ, ಕೊಡಗು ಗೌಡ ಸಮಾಜ, ಮೈಸೂರು.

36. 15.12.2020 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ, ದ.ಕ ಮತ್ತು ಕೊಡಗು ಗೌಡ ಸಮಾಜ, ಬೆಂಗಳೂರು.

37. 15.12.2020 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ, ಅರೆಭಾಷೆ ಗೌಡ ಸಮಾಜ, ಆಲೂರು ಸಿದ್ದಾಪುರ.

38. 15.12.2020 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ, ಗೌಡ ಸಮಾಜ, ಭಾಗಮಂಡಲ.

39. 17.12.2020 : ಅರೆಭಾಷೆ ಪಾರಂಪರಿಕ ವಸ್ತುಕೋಶದ ಬಗ್ಗೆ ಸಭೆ, ದೇರಳಕಟ್ಟೆ.

40. 20.12.2020 : ಅರೆಭಾಷೆ ವಿಶ್ವಕೋಶ ರಚನಾ ಕಮ್ಮಟ. ಸುಳ್ಯದಲ್ಲಿ ವಿಶ್ವಕೋಶ ತಯಾರಿ ಪ್ರಯುಕ್ತ ಪೂರ್ವಭಾವಿ ಸಭೆ. ಸಂಪನ್ಮೂಲ ವ್ಯಕ್ತಿ:. ಪ್ರೊ. ಕೃಷ್ಣೇಗೌಡ, ವಿಶ್ರಾಂತ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ ಯುವಜನ ಸಂಯುಕ್ತ ಮಂಡಳಿ, ಸುಳ್ಯ.

41. 01.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ರಂಗಾಯಣ, ಶಿವಮೊಗ್ಗ.

42. 02.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ನಟ ಮಿತ್ರರು, ತೀರ್ಥಹಳ್ಳಿ

43. 03.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ಆಳ್ವಾಸ್ ನುಡಿಸಿರಿ ಘಟಕ, ಕುಂದಾಪುರ.

44. 04.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ಸುರಭಿ, ಬೈಂದೂರು.

45. 06.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ಆಳ್ವಾಸ್, ಮೂಡಬಿದ್ರೆ.

46. 07.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ಆಳ್ವಾಸ್, ಮೂಡಬಿದ್ರೆ.

47. 08.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ಯುವಕ ಮಂಡಲ, ಕನಕಮಜಲು.

48. 09.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ಬಾಲವನ, ಪುತ್ತೂರು.

49. 10.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ಸಂತ ಜೋಸೆಫರ ವಿದ್ಯಾಸಂಸ್ಥೆ ಆವರಣ, ಮಡಿಕೇರಿ.

50. 11.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ಪದುವ ಕಾಲೇಜು, ಮಂಗಳೂರು.

51. 13.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ಕೆ.ಎಸ್.ಎಸ್. ಕಾಲೇಜು, ಸುಬ್ರಹ್ಮಣ್ಯ.

52. 14.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ರಂಗಾಯಣ, ಮೈಸೂರು.

53. 17.01.2021 : **ಸಾಹೇಬ್ರು ಬಂದವೇ,** ಅರೆಭಾಷೆ ನಾಟಕ ಸರಣಿ ಪ್ರದರ್ಶನ. ರವೀಂದ್ರ ಕಲಾಕ್ಷೇತ್ರ, ಬೆಂಗಳೂರು.

54. 24.01.2021 : ವಿಶ್ವಕೋಶ ರಚನೆ ಕಮ್ಮಟ. ಸಂಪನ್ಮೂಲ ವ್ಯಕ್ತಿ : ಪ್ರೊ. ಕೃಷ್ಣೇಗೌಡ, ವಿಶ್ರಾಂತ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ, ಕೊಡಗು ಗೌಡ ಸಮಾಜ, ಮಡಿಕೇರಿ.

55. 31.01.2021 : ಎರಡನೆಯ ಅರೆಭಾಷೆ ಸಾಹಿತ್ಯ ಸಮ್ಮೇಳನದ **'ಐಮರ'** ಸ್ಮರಣಸಂಚಿಕೆ ಬಿಡುಗಡೆ. ಆಲೂರು ಸಿದ್ದಾಪುರ.

56. 06.02.21 : ಬಹುಭಾಷಾ ಸಾಂಸ್ಕೃತಿಕ ಸಂಭ್ರಮ ಕಾರಾವಾರ 2021. ಶ್ರೀಮತಿ ಮಿಲನ ಭರತ್, ಅರೆಭಾಷೆ ಭಾಷಾ ಸಾಧಕಿಗೆ ಗೌರವ ಸನ್ಮಾನ. ಅರೆಭಾಷೆ ವಿಚಾರಗೋಷ್ಠಿ. ಸಂಪನ್ಮೂಲ ವ್ಯಕ್ತಿ : ಡಾ. ಪುರುಷೋತ್ತಮ ಕಿರ್ಲಾಯ, ಅರೆಭಾಷೆ ಕವಿಗೋಷ್ಠಿ. ಸಂಪನ್ಮೂಲ ವ್ಯಕ್ತಿ : ಶ್ರೀಮತಿ ಸ್ಮಿತಾ ಅಮೃತರಾಜ್. ಕಾರಾವಾರ.

57. 23.02.21 : 7 ದಿನಗಳ ಅರೆಭಾಷೆ ಸಂಸ್ಕೃತಿ ತರಬೇತಿ ಶಿಬಿರ ಉದ್ಘಾಟನಾ ಸಮಾರಂಭ. ಕೊಡಗು ಗೌಡ ಮಹಿಳಾ ಒಕ್ಕೂಟ, ಗುಡ್ಡೆಮನೆ ಅಪ್ಪಯ್ಯಗೌಡ ರಸ್ತೆ, ಮಡಿಕೇರಿ.

58. 24.02.21 : ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ ಉದ್ಘಾಟನಾ ಸಮಾರಂಭ. ನೆಹರೂ ಮೆಮೋರಿಯಲ್ ಕಾಲೇಜು, ಸುಳ್ಯ.

58. 01.03.21 : 7 ದಿನಗಳ ಅರೆಭಾಸೆ ಸಂಸ್ಕೃತಿ ತರಬೇತಿ ಶಿಬಿರದ ಸಮಾರೋಪ ಸಮಾರಂಭ. ಕೊಡಗು ಗೌಡ ಮಹಿಳಾ ಒಕ್ಕೂಟ, ಗುಡ್ಡೆಮನೆ ಅಪ್ಪಯ್ಯಗೌಡ ರಸ್ತೆ, ಮಡಿಕೇರಿ

60. 08.03.21 : **ಲೇಖನ ಕೌಶಲ್ಯ.** ಕಾಲೇಜು ಮಕ್ಕಳಿಗೆ ಬರವಣಿಗೆ ಹೇಳಿಕೊಡುವ ಕಾರ್ಯಾಗಾರ. ಸಂಪನ್ಮೂಲ ವ್ಯಕ್ತಿ:ವಸುಧೇಂದ್ರ, ಬೆಂಗಳೂರು. ಕೆ.ಎಸ್.ಎಸ್. ಕಾಲೇಜು, ಸುಬ್ರಹ್ಮಣ್ಯ.

61. 13.03.2021 : ವಿಶ್ವಕೋಶ ರಚನೆ ಪೂರ್ವಭಾವಿ ಸಭೆ. ಸಂಪನ್ಮೂಲ ವ್ಯಕ್ತಿ : ಪ್ರೊ. ಕೃಷ್ಣೇಗೌಡ, ವಿಶ್ರಾಂತ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ, ಉಡುಪಿ ಗಾರ್ಡನ್, ಪರಿವಾರಕಾನ, ಸುಳ್ಯ.

62. 21.03.2021 : ವಿಶ್ವಕೋಶ ರಚನೆ. ಪೂರ್ವಭಾವಿ ಸಭೆ. ಅರೆಭಾಷೆ ಅಕಾಡೆಮಿ, ಮಡಿಕೇರಿ.

63. 25.03.21 : **ಲೇಖನ ಕೌಶಲ್ಯ.** ಕಾಲೇಜು ಮಕ್ಕಳಿಗೆ ಬರವಣಿಗೆ ಹೇಳಿಕೊಡುವ ಕಾರ್ಯಾಗಾರ. ಸಂಪನ್ಮೂಲ ವ್ಯಕ್ತಿ:ವಸುಧೇಂದ್ರ, ಬೆಂಗಳೂರು. ಎಫ್.ಎಂ.ಸಿ, ಕಾಲೇಜು, ಮಡಿಕೇರಿ.

64. 01.04.2021 : 7 ದಿನಗಳ ಚಿತ್ರಕಲಾ ಶಿಬಿರ ಉದ್ಘಾಟನೆ. ಅರೆಭಾಷೆ ಸಮುದಾಯದ ನಡುವೆ ಇರುವ ಸಂಸ್ಕೃತಿ, ಆಚರಣೆ ಹಾಗೂ ಪರಿಸರದ ಚಿತ್ರಗಳ ಕ್ಯಾನ್ವಾಸ್ ಮೇಲೆ ಮೂಡಿಸುವ ಶಿಬಿರ. ಈ ಶಿಬಿರದಲ್ಲಿ 10 ಜನ ಕಲಾವಿದರು, ಅರೆಭಾಷೆ ಪ್ರದೇಶದ ಬೇರೆ ಬೇರೆ ಮನೆಗಳಲ್ಲಿ ಒಂದು ವಾರ ಚಿತ್ರ ಬಿಡಿಸುವ ಕಾರ್ಯಾಗಾರ. ಚಿತ್ರ ಬಿಡಿಸುವ ಸಂದರ್ಭದಲ್ಲಿ ಕಲಾವಿದರು ಮತ್ತು ಮನೆಯವರ ನಡುವೆ ಒಂದು ಸಾಂಸ್ಕೃತಿಕ ಕೊಡು–ಕೊಳ್ಳುವಿಕೆ ಕಾರ್ಯಕ್ರಮ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.

65. 07.04.2021 : 7 ದಿನಗಳ ಚಿತ್ರಕಲಾ ಶಿಬಿರದ ಸಮಾರೋಪ ಸಮಾರಂಭ. ಅರೆಭಾಸೆ ಸಮುದಾಯದ ನಡುವೆ ಇರುವ ಸಂಸ್ಕೃತಿ, ಆಚರಣೆ ಹಾಗೂ ಪರಿಸರದ ಚಿತ್ರಗಳ ಕ್ಯಾನ್ವಾಸ್ ಮೇಲೆ ಮೂಡಿಸುವ ಶಿಬಿರ. ಈ ಶಿಬಿರದಲ್ಲಿ 10 ಜನ ಕಲಾವಿದರು ನಮ್ಮ ಅರೆಭಾಷೆ ಪ್ರದೇಶದ ಬೇರೆ ಬೇರೆ ಮನೆಗಳಲ್ಲಿ ಒಂದು ವಾರದ ಬಿಡಿಸುವ ಕಾರ್ಯಾಗಾರ. ಚಿತ್ರ ಬಿಡಿಸುವ ಸಂದರ್ಭದಲ್ಲಿ ಕಲಾವಿದರು ಮತ್ತು ಮನೆಯವರ ನಡುವೆ ಒಂದು ಸಾಂಸ್ಕೃತಿಕ ಕೊಡು.ಕೊಳ್ಳುವಿಕೆ ಕಾರ್ಯಕ್ರಮ. ಭಾರತೀಯ ವಿದ್ಯಾಭವನ, ಮಡಿಕೇರಿ.

66. 15.04.2021 : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಅರೆಭಾಷೆ ಗೌಡ ಸಮಾಜ, ಐಗೂರು.

67. 17.04.2021 : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಅರೆಭಾಷೆ ಗೌಡ ಸಮಾಜ, ಐಗೂರು.

68. 29.07.2021 : ಅರೆಭಾಷೆ ಗಮಕ ವಿಡೀಯೋ ಮುದ್ರಣ ಕಾರ್ಯಕ್ರಮ. ಸುದ್ದಿ ಬಿಡುಗಡೆ ಕಚೇರಿ, ಸುಳ್ಯ.

69. 31.07.2021 : **ಸಾಕ್ಷ್ಯಚಿತ್ರ ಬಿಡುಗಡೆ.** ಪ್ರಸಿದ್ಧ ಚಿತ್ರ ಕಲಾವಿದ, ರಂಗ ನಿರ್ದೇಶಕ ಮೋಹನ ಸೋನರ ಬಗ್ಗೆ ತಯಾರಿಸಿದ ಸಾಕ್ಷ್ಯಚಿತ್ರ ಬಿಡುಗಡೆ. ಕೆ.ವಿ.ಜಿ. ಆಯುರ್ವೇದಿಕ್ ಮೆಡಿಕಲ್ ಕಾಲೇಜು ಆಡಿಟೋರಿಯಂ, ಸುಳ್ಯ. https://youtu.be/hlqN34FblgU

70. 04.08.2021 : **ಸಾಕ್ಷ್ಯಚಿತ್ರ ಪ್ರದರ್ಶನ.** ಪ್ರಸಿದ್ಧ ಚಿತ್ರ ಕಲಾವಿದ, ರಂಗ ನಿರ್ದೇಶಕ ಮೋಹನ ಸೋನರ ಸಾಕ್ಷ್ಯಚಿತ್ರ ಪ್ರದರ್ಶನ. ಭಾರತೀಯ ವಿದ್ಯಾಭವನ, ಮಡಿಕೇರಿ.

71. 07.08.2021 : ವಾದ್ಯ ಪರಿಕರ ವಿತರಣೆ. ಅಕಾಡೆಮಿ ವಿಶೇಷ ಘಟಕ ಯೋಜನೆಯ ಅಡಿಯಲ್ಲಿ ವಾದ್ಯ ಪರಿಕರಗಳನ್ನು ಸುಳ್ಯ ತಾಲೂಕಿನ ಆಲೆಟ್ಟಿ ಗ್ರಾಮ, ಆರಂಬೂರಿನ ದೈವ ನರ್ತಕ ಬಾಬು ಅಜಿಲ ಅವರಿಗೆ ಕರ್ನಾಟಕ ಘನ ಸರ್ಕಾರದ ಮಂತ್ರಿಗಳಾದ ಶ್ರೀ ಎಸ್. ಅಂಗಾರರಿಂದ ವಿತರಣೆ. ಆಲೆಟ್ಟಿ ಗ್ರಾಮ, ಅರಂಬೂರಿನ ದೈವ ನರ್ತಕ ಬಾಬು ಅಜಿಲರ ಮನೆ.

72. 16.08.2021 : 4 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನ ಸಮಾರಂಭ. ಅರೆಭಾಷೆ ಗೌಡ ಸಮಾಜ ಸಭಾಂಗಣ, ಮೂರ್ನಾಡು.

73. 19.08.2021 : 4 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಅರೆಭಾಷೆ ಗೌಡ ಸಮಾಜ ಸಭಾಂಗಣ, ಮೂರ್ನಾಡು.

74. 20.08.2021 : ವಾದ್ಯ ಪರಿಕರ ವಿತರಣೆ. ಅಕಾಡೆಮಿ ವಿಶೇಷ ಘಟಕ ಯೋಜನೆಯ ಅಡಿಲಿ ವಾದ್ಯ ಪರಿಕರಗಳನ್ನು ಕಡಬ ತಾಲ್ಲೂಕಿನ ಏನೆಕಲ್ಲು ನಿವಾಸಿ ಪ್ರವೀಣ್ ಅವರಿಗೆ ಅಕಾಡೆಮಿ ಅಧ್ಯಕ್ಷರಾದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆಯವರಿಂದ ವಿತರಣೆ. ಏನೆಕಲ್ಲು, ಕಡಬ ತಾಲೂಕು.

75. 27.08.2021 : **ಎನ್. ಎಸ್. ದೇವಿಪ್ರಸಾದ್ ಸಂಪಾಜೆ ಸಾಕ್ಷ್ಯಚಿತ್ರ ಲೋಕಾರ್ಪಣೆ,** ಆನ್‌ಲೈನ್ ಯೂಟ್ಯೂಬ್. https://youtu.be/Z7st_mTAqzc

76. 27.08.2021 : **ಕೊಡಗು ಗೌಡ ವಿದ್ಯಾಸಂಘ(ರಿ.) ಸಾಕ್ಷ್ಯಚಿತ್ರ ಲೋಕಾರ್ಪಣೆ,** ಆನ್‌ಲೈನ್ ಯೂಟ್ಯೂಬ್. https://youtu.be/7vQiAwpLsSY

77. 27.08.2021 : ಅರೆಭಾಷೆ ಪದಮಾಲೆ. 8 ಅರೆಭಾಷೆ ಹಾಡುಗಳ ರಾಗ ಸಂಯೋಜನೆ ಮತ್ತೆ ವಿಡೀಯೋ ರೆರ್ಕಾಡಿಂಗ್. ಲೋಕಾರ್ಪಣೆ, ಆನ್‌ಲೈನ್ ಯೂಟ್ಯೂಬ್. https://youtube.com/playlist?list=PLGw-Sy29EksfTi42b8U5ES5udycJC2yQG

78. 27.08.2021 : ಅರೆಭಾಷೆ ಪುಸ್ತಕಗಳ ಡಿಜಿಲೀಕರಣ ಕಾರ್ಯಕ್ರಮ.

79. 27.08.2021 : ಅರೆಭಾಷೆ ಕತೆ, ಕವಿತೆ, ಲಲಿತ ಪ್ರಬಂಧ ಸ್ವರ್ದೆ 2020.

80. 27.08.2021 : ದಶವರ್ಷ ಸಂಭ್ರಮದ ಉದ್ಘಾಟನಾ ಸಮಾರಂಭ. ವಾದ್ಯ ಪರಿಕರ ಹಂಚಿಕೆ, ಕತೆ, ಕವಿತೆ ಲಲಿತ ಪ್ರಬಂಧ ಸ್ವರ್ದೆಯಲ್ಲಿ ಗೆದ್ದವರಿಗೆ ಬಹುಮಾನ ವಿರತಣೆ, **ಹರಿಸೇವೆ ಸಾಕ್ಷ್ಯಚಿತ್ರ ಬಿಡುಗಡೆ.** https://youtu.be/FhWYrbXZVeQ ಅರೆಭಾಷೆ ಕತೆಗಳ ಆಡಿಯೋ ಬಿಡುಗಡೆ. https://youtube.com/playlist?list=PLGw-Sy29EksdTxM4Z0aVNAnrEkWg_PpgE. ಅರೆಭಾಷೆ ಅಕಾಡೆಮಿ ವೆಬ್‌ಸೈಟ್ ಚಾಲನೆ. ಕೊಡಗು ಗೌಡ ಸಮಾಜ, ಮಡಿಕೇರಿ.

81. 06.09.2021 : 4 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಕೊಡಗು ಗೌಡ ಸಮಾಜ, ಪಿರಿಯಾಪಟ್ಟಣ.

82. 07.09.2021 : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಕೆ.ಎಸ್.ಎಸ್. ಕಾಲೇಜು ಸಭಾಂಗಣ, ಸುಬ್ರಹ್ಮಣ್ಯ.

**83. 09.09.2021** : 4 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಕೊಡಗು ಗೌಡ ಸಮಾಜ, ಪಿರಿಯಾಪಟ್ಟಣ.

**84. 09.09.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಕೆ.ಎಸ್.ಎಸ್. ಕಾಲೇಜು ಸಭಾಂಗಣ, ಸುಬ್ರಹ್ಮಣ್ಯ.

**85. 10.09.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಕೆ.ವಿ.ಜಿ ಐ.ಟಿ.ಐ ಕಾಲೇಜು, ಭಾಗಮಂಡಲ.

**86. 11.09.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸಭಾಂಗಣ, ಐನೆಕಲ್ಲು.

**87. 12.09.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಕೆ.ವಿ.ಜಿ. ಐ.ಟಿ.ಐ. ಕಾಲೇಜು, ಭಾಗಮಂಡಲ.

**88. 13.09.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸಭಾಂಗಣ, ಐನೆಕಲ್ಲು.

**89. 18.09.2021** : ಅಕಾಡೆಮಿ ಸದಸ್ಯರಿಗೆ ತರಬೇತಿ ಕಾರ್ಯಗಾರ ಉದ್ಘಾಟನಾ ಸಮಾರಂಭ. ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ ಕುಪ್ಪಳ್ಳಿ, ತೀರ್ಥಹಳ್ಳಿ.

**90. 19.09.2021** : ಅಕಾಡೆಮಿ ಸದಸ್ಯರಿಗೆ ತರಬೇತಿ ಕಾರ್ಯಗಾರ ಸಮಾರೋಪ ಕಾರ್ಯಕ್ರಮ. ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ ಕುಪ್ಪಳ್ಳಿ, ತೀರ್ಥಹಳ್ಳಿ.

**91. 20.09.2021** : 4 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಅರೆಭಾಷೆ ಗೌಡ ಸಮಾಜದ ಸಭಾಭವನ, ಸಂಗಯ್ಯನಪುರ.

**92. 23.09.2021** : 4 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಅರೆಭಾಷೆ ಗೌಡ ಸಮಾಜದ ಸಭಾಭವನ, ಸಂಗಯ್ಯನಪುರ.

**93. 23.09.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಅಮೃತ ಸಹಕಾರ ಸದನ, ಮಂಡೆಕೋಲು.

**94. 24.09.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಕೊಡಗು ಗೌಡ ಸಮಾಜದ ಸಭಾಂಗಣ, ಮೈಸೂರು.

**95. 25.09.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಅಮೃತ ಸಹಕಾರ ಸದನ, ಮಂಡೆಕೋಲು.

**96. 26.09.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಕೊಡಗು ಗೌಡ ಸಮಾಜದ ಸಭಾಂಗಣ, ಮೈಸೂರು.

**97. 27.9.2021** : 4 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಅರೆಭಾಷೆ ಗೌಡ ಸಮಾಜ ಸಭಾಂಗಣ, ಮರಗೋಡು.

**98. 30.09.2021** : 4 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಅರೆಭಾಷೆ ಗೌಡ ಸಮಾಜ ಸಭಾಂಗಣ, ಮರಗೋಡು.

**99. 02.10.2021** : ಅರೆಭಾಷೆ ನಾಟಕ **'ಹೊತ್ತ್‌ಕಂತ್‌ಕನ'** ರಂಗ ತರಬೇತಿ ಶಿಬಿರ ಉದ್ಘಾಟನೆ. ಕೆ.ಎಸ್. ಎಸ್. ಕಾಲೇಜು, ಸುಬ್ರಹ್ಮಣ್ಯ.

**100. 03.10.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಗೌಡ ಸಮಾಜ, ಕುಶಾಲನಗರ.

**101. 05.10.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಗೌಡ ಸಮಾಜ, ಕುಶಾಲನಗರ

**102. 14.10.2021** : ಅರೆಭಾಷೆ ಯಕ್ಷಗಾನ. ಕೃಷ್ಣಾರ್ಜುನ ಕಾಳಗದ ವಿಡೀಯೋ ಮುದ್ರಣ. ಯೂಟ್ಯೂಬ್. https://youtu.be/kcvYcmnoSng

**103. 15.10.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಸ.ಹಿ.ಪ್ರಾ. ಶಾಲೆ ಪೈಲಾರ್.

**104. 17.10.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. ಸ.ಹಿ.ಪ್ರಾ. ಶಾಲೆ ಪೈಲಾರ್.

**105. 18.10.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. 'ಸಿರಿ ಸೌದ' ಅರಂತೋಡು ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸಭಾಭವನ.

**106. 20.10.2021** : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಸಮಾರಂಭ. 'ಸಿರಿ ಸೌದ' ಅರಂತೋಡು ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸಭಾಭವನ.

**107. 21.10.2021** : ಪ್ರೆಸ್‌ಕ್ಲಬ್ ಮಡಿಕೇರಿ ವತಿಯಿಂದ ಅರೆಭಾಷೆ ಅಕಾಡೆಮಿ ಅಧ್ಯಕ್ಷ ಸದಸ್ಯರುಗಳ ಜೊತೆ ಅಕಾಡೆಮಿ ಚಟುವಟಿಕೆ ಬಗ್ಗೆ ಮಾತುಕತೆ ಕಾರ್ಯಕ್ರಮ. ಪ್ರೆಸ್‌ಕ್ಲಬ್ ಮಡಿಕೇರಿ.

**108. 22.10.2021** : ಸ್ವಾತಂತ್ರ್ಯ ಹೋರಾಟಗಾರ ಹುತಾತ್ಮ ಗುಡ್ಡೆಮನೆ ಅಪ್ಪಯ್ಯಗೌಡರ ಸ್ಮರಣಾರ್ಥ ಭಾರತೀಯ ಅಂಚೆ ಇಲಾಖೆ ಮೂಲಕ ವಿಶೇಷ ಅಂಚೆ ಲಕೋಟೆ ಬಿಡುಗಡೆ. ಮಯೂರ ವ್ಯಾಲಿ ಹೋಟೇಲ್, ಮಡಿಕೇರಿ.

109. 23.10.2021 : 2 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಸಮಾರಂಭ. ಕೊಡಗು ಗೌಡ ಸಮಾಜ ಸಭಾಂಗಣ, ಬೆಂಗಳೂರು.

110. 24.10.2021 : 2 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರ ಸಮಾರೋಪ ಸಮಾರಂಭ. ಕೊಡಗು ಗೌಡ ಸಮಾಜ ಸಭಾಂಗಣ, ಬೆಂಗಳೂರು.

111. 25.10.2021 : ಕನ್ನಡ ರಾಜ್ಯೋತ್ಸವ ಪ್ರಯುಕ್ತ ಕನ್ನಡ ಚಲನಚಿತ್ರೋತ್ಸವ. ಚಿತ್ರ : **ಮುನ್ನೀಫ.** ಕೆ.ಎಸ್.ಎಸ್.ಕಾಲೇಜು ಸುಬ್ರಹ್ಮಣ್ಯ, ಕಡಬ ತಾಲೂಕು.

112. 26.10.2021 : ಕನ್ನಡ ರಾಜ್ಯೋತ್ಸವ ಪ್ರಯುಕ್ತ ಕನ್ನಡ ಚಲನಚಿತ್ರೋತ್ಸವ. ಚಿತ್ರ : **ಕಾರಂತಜ್ಜನಿಗೊಂದು ಪತ್ರ,** ವಿವೇಕಾನಂದ ವಿದ್ಯಾಸಂಸ್ಥೆಗಳು ವಿನೋಬನಗರ, ಜಾಲ್ಸೂರು, ಸುಳ್ಯ ತಾಲೂಕು.

113. 27.10.2021 : ಕನ್ನಡ ರಾಜ್ಯೋತ್ಸವ ಪ್ರಯುಕ್ತ ಕನ್ನಡ ಚಲನಚಿತ್ರೋತ್ಸವ. ಚಿತ್ರ : **ಕಾಡ ಬೆಳದಿಂಗಳು,** ಭಾರತೀಯ ವಿದ್ಯಾಭವನ ಮಡಿಕೇರಿ.

114. 28.10.2021 : ಕನ್ನಡ ರಾಜ್ಯೋತ್ಸವ ಪ್ರಯುಕ್ತ ಕನ್ನಡ ಚಲನಚಿತ್ರೋತ್ಸವ. ಚಿತ್ರ : **ದ್ವೀಪ.** ಸರಕಾರಿ ಪ್ರಥಮ ದರ್ಜೆ ಕಾಲೇಜು, ಬೆಟ್ಟಂಪಾಡಿ, ಪುತ್ತೂರು ತಾಲೂಕು.

115. 29.10.2021 : ಕನ್ನಡ ರಾಜ್ಯೋತ್ಸವ ಪ್ರಯುಕ್ತ ಕನ್ನಡ ಚಲನಚಿತ್ರೋತ್ಸವ. ಚಿತ್ರ : **ನಾನು ಅವನಲ್ಲ ಅವಳು.** ಕನ್ನಡ ವಿಭಾಗ, ಸಂತ ಅಲೋಶಿಯಸ್ ಕಾಲೇಜು(ಸ್ವಾಯತ್ತ), ಮಂಗಳೂರು.

116. 30.10.2021 : ಕನ್ನಡ ರಾಜ್ಯೋತ್ಸವ ಪ್ರಯುಕ್ತ ಕನ್ನಡ ಚಲನಚಿತ್ರೋತ್ಸವ. ಚಿತ್ರ : **ಪುಟ್ಟಕ್ಕನ ಹೈವೇ.** ಪತ್ರಿಕೋದ್ಯಮ ವಿಭಾಗ, ವಿವೇಕಾನಂದ ಕಾಲೇಜು, ಪುತ್ತೂರು ತಾಲೂಕು.

117. 30.10.2021 : ಕನ್ನಡ ರಾಜ್ಯೋತ್ಸವ ಪ್ರಯುಕ್ತ ಕನ್ನಡ ಚಲನಚಿತ್ರೋತ್ಸವ. ಚಿತ್ರ : **ನಾನು ಅವನಲ್ಲ ಅವಳು.** ನೆಹರು ಸ್ಮಾರಕ ಪದವಿ ಕಾಲೇಜು, ಸುಳ್ಯ, ದ.ಕ ಜಿಲ್ಲೆ.

118. 31.10.2021 : ಸ್ವಾತಂತ್ರ್ಯ ಹೋರಾಟಗಾರ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ಹುತಾತ್ಮ ದಿನಾಚರಣೆ. ಸುಬೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ಸ್ಮರಣಾರ್ಥ ವಿಶೇಷ ಅಂಚೆ ಲಕೋಟೆ ಭಾರತೀಯ ಅಂಚೆ ಇಲಾಖೆಯಿಂದ ಬಿಡುಗಡೆ. ಗುಡ್ಡೆಮನೆ ಅಪ್ಪಯ್ಯಗೌಡರ ಸ್ಮಾರಕ, ಸುದರ್ಶನ ವೃತ್ತ, ಮಡಿಕೇರಿ.

119. 13.11.2021 : ಅರೆಭಾಷೆ ಕಾಲೇಜು ರಂಗ ತರಬೇತಿ ಶಿಬಿರ ಸಮಾರೋಪ ಮತ್ತು **'ಹೊತ್ತ ಕಂತ್‌ಕನ'** ನಾಟಕ ಪ್ರದರ್ಶನ. ಕೆ.ಎಸ್.ಎಸ್. ಕಾಲೇಜು, ಸುಬ್ರಹ್ಮಣ್ಯ.

120. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ. ಗೌಡ ಸಮಾಜ, ಮರಗೋಡು.

121. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ. ಗೌಡ ಸಮಾಜ, ಪಿರಿಯಾಪಟ್ಟಣ.

122. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ. ಗೌಡ ಸಮಾಜ, ಆಲೂರು ಸಿದ್ದಾಪುರ.

123. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ. ಪ್ರಗತಿ ಮಹಿಳಾ ಮಂಡಲ, ಉಜಿರೆ.

124. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ. ಕೊಡಗು ಗೌಡ ಸಮಾಜ, ಬೆಂಗಳೂರು.

125. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ. ನಮ್ಮನೆ ಸಾಂಸ್ಕೃತಿಕ ಕಲಾಕೇಂದ್ರ, ಲಗ್ಗೆರೆ, ಬೆಂಗಳೂರು.

126. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸನ್ಮಾನ ಕಾರ್ಯಕ್ರಮ. ಗೌಡ ಸಮಾಜ, ಭಾಗಮಂಡಲ.

127. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸನ್ಮಾನ ಕಾರ್ಯಕ್ರಮ. ಶಾಂಗ್ರಿಲಾ ಹೋಂ ಸ್ಟೇ, ದೇವಸ್ತೂರು.

128. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ. ಗೌಡ ಸಮಾಜ, ಐಗೂರು.

129. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಸರಣಿ ಕಾರ್ಯಕ್ರಮ. ಗೌಡ ಸಮಾಜ, ಕುಶಾಲನಗರ.

130. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಎನ್.ಎಸ್. ದೇವಿಪ್ರಸಾದ್ ಸಾಕ್ಷ್ಯಚಿತ್ರ ಪ್ರದರ್ಶನ ಮತ್ತು ಅರೆಭಾಷೆ ಸಾಂಸ್ಕೃತಿಕ ಕಾರ್ಯಕ್ರಮ. ಭಾರತೀಯ ವಿದ್ಯಾಭವನ, ಮಡಿಕೇರಿ.

131. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ ಅರೆಭಾಷೆ ಯಕ್ಷ ಹಾಡುಗಳ ಗಾಯನ. ತುಳು ಭವನ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಉರ್ವಸ್ಟೋರ್, ಮಂಗಳೂರು.

132. 15.12.2021 : ಅರೆಭಾಷೆ ದಿನಾಚರಣೆ, ಗೌಡ ಸಮಾಜ ಸಭಾಂಗಣ, ಮೂರ್ನಾಡು.

133. 15.12.2021 : ಅರೆಭಾಷೆ ದಿನಾಚರಣೆ. ಕೊಡಗು ಗೌಡ ಸಮಾಜ, ಮೈಸೂರು.

134. 15.12.2021 : ಅರೆಭಾಷೆ ದಿನಾಚರಣೆ. ಕೆ.ಎಸ್.ಎಸ್. ಕಾಲೇಜು, ಸುಬ್ರಹ್ಮಣ್ಯ.

135. 15.12.2021 : ಅರೆಭಾಷೆ ದಿನಾಚರಣೆ ಪ್ರಯುಕ್ತ **'ವಾಲಿ ಮೋಕ್ಷ'.** ಅರೆಭಾಷೆ ಯಕ್ಷಗಾನ ತಾಳಮದ್ದಲೆ ಪ್ರದರ್ಶನ. ಕನ್ನಡ ಭವನ, ಅಂಬಟೆಡ್ಕ, ಸುಳ್ಯ. https://youtu.be/2eT8HYWbCqw

136. 15.12.2021 : ಅರೆಭಾಷೆ ದಿನಾಚರಣೆ. ನೆಹರೂ ಮೆಮೋರಿಯಲ್ ಕಾಲೇಜು ಸುಳ್ಯ

137. 20.12.2022 : ಅರೆಭಾಷೆ ಐ.ಎಸ್.ಓ. ಸ್ಥಾನಮಾನದ ಬಗ್ಗೆ ಮುಖ್ಯಮಂತ್ರಿಗಳ ಇ–ಆಡಳಿತ ಸಲಹೆಗಾರ ಬೇಳೂರು ಸುದರ್ಶನರ ಜೊತೆ ಆನ್‌ಲೈನ್ ಸಭೆ.

138. 03.01.2022 : ಅರೆಭಾಷೆ ಕತೆ, ಕವಿತೆ ಲಲಿತ ಪ್ರಬಂಧ ಸ್ಪರ್ಧೆ 2021.

139. 03.01.2022 : ಅಕಾಡೆಮಿ ಗೌರವ ಪ್ರಶಸ್ತಿ ಪ್ರದಾನ ಕಾರ್ಯಕ್ರಮ. ಸುಳ್ಯ

140. 19.01.2022 : ಎನ್.ಎಸ್. ದೇವಿಪ್ರಸಾಸ್ ಸಂಪಾಜೆ ಸ್ಮರಣೆ : ನುಡಿನಮನ ಕಾರ್ಯಕ್ರಮ. ಯೂಟ್ಯೂಬ್, ಫೇಸ್‌ಬುಕ್.

141. 25.02.2022 : 3 ದಿನಗಳ ಅರೆಭಾಷೆ ಸಂಸ್ಕೃತಿ ಶಿಬಿರ. ಪಡಿಕ್ಕಲ್ ಐನ್‌ಮನೆ, ಗೋಣಿಕೊಪ್ಪ.

142. 02.03.2022 : ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ಪದವಿ ಪೂರ್ವ ವಿದ್ಯಾಲಯ, ಸುಬ್ರಹ್ಮಣ್ಯದಲ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ ಉದ್ಘಾಟನಾ ಸಮಾರಂಭ.

143. 04.03.2022 : ಕರ್ನಾಟಕ ಸರಕಾರದಿಂದ ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಅರೆಭಾಷೆ ಸಂಶೋಧನಾ ಕೇಂದ್ರದ ಘೋಷಣೆ.

144. 12.03.2022 : ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂವರ್ಧನಾ ಸಮಿತಿ ಇದರ ಗ್ರಾಮ ಸಂಚಾಲಕರ ಮತ್ತು ಸಹ ಸಂಚಾಲಕರ ಸಭೆ. ಕೆ.ಎಸ್. ಗೌಡ ಕಾಲೇಜು, ನಿಂತಿಕಲ್ಲು.

145. 20.3.2022 : ಅಕಾಡೆಮಿ ಪ್ರಕಟ ಮಾಡಿದ ಅರೆಭಾಷೆ ಪುಸ್ತಕಗಳ ಬಿಡುಗಡೆ. ಮೋದಿ ಭವನ, ಚೆಟ್ಟಳ್ಳಿ.

146. 15.04.2022ರಿಂದ 16.04.2022 : ಅರೆಭಾಷೆ ಪದಕೋಶದ ಅವಲೋಕನ ಸಭೆ. ಪ್ರೊ. ಚೆ. ರಾಮಸ್ವಾಮಿ ಮತ್ತು ಅಕಾಡೆಮಿ ಸದಸ್ಯರು. ಮೈಸೂರು.

147. 29.05.2022 ರಿಂದ 05.06.2022ರ ವರೆಗೆ 8 ದಿನಗಳ ಅರೆಭಾಷೆ ಪದಕೋಶದ ಕರಡು ಪ್ರತಿ ತಿದ್ದುಪಡಿ ಕಾರ್ಯಕ್ರಮ. ಮಂಗಳೂರು.

148. 25.06.2022 : ಡಿಜಿಟಲ್ ಪುಸ್ತಕ ಬಿಡುಗಡೆ ಕಾರ್ಯಕ್ರಮ, ಭಾರತೀಯ ವಿದ್ಯಾಭವನ, ಮಡಿಕೇರಿ. https://arebashe.sanchaya.net/

149. 23.07.2022 : ಅರೆಭಾಷೆ ಪಾರಂಪರಿಕ ವಸ್ತುಕೋಶ, ಅರೆಭಾಷೆ ನಾಟಕ ಕೃತಿ, ಯಕ್ಷಗಾನ ಕೃತಿ, ಕತೆ, ಪ್ರವಾಸ ಕಥನ ಪುಸ್ತಕಗಳ ಬಿಡುಗಡೆ. ಅನ್ನಪೂರ್ಣೇಶ್ವರಿ ಕಲಾಮಂದಿರ, ಪೆರಾಜೆ, ಮಡಿಕೇರಿ

150. 30.07.2022 : ಅರೆಭಾಷೆ ಪದಕೋಶ ಬಿಡುಗಡೆ ಕಾರ್ಯಕ್ರಮ. ಕೊಡಗು ಗೌಡ ಸಮಾಜ, ಮಡಿಕೇರಿ.

151. 06.08.2022 : ಅರೆಭಾಷೆ ಪದಕೋಶ ಬಿಡುಗಡೆ ಕಾರ್ಯಕ್ರಮ ಮತ್ತು ರಾಷ್ಟ್ರೀಯ ವಿಚಾರಗೋಷ್ಠಿ, ಸಂತ ಅಲೋಶಿಯಸ್ ಕಾಲೇಜು(ಸ್ವಾಯತ್ತ), ಮಂಗಳೂರು.

152. 29.08.2022 : ಅಕಾಡೆಮಿ ಗೌರವ ಪ್ರಶಸ್ತಿ ಪ್ರದಾನ ಮತ್ತು ದಶವರ್ಷ ಸಂಭ್ರಮದ ಸಮಾರೋಪ ಕಾರ್ಯಕ್ರಮ. ಕೊಡಗು ಗೌಡ ಸಮಾಜ, ಮಡಿಕೇರಿ.

153. 29.08.2022 : ಅರೆಭಾಷೆ ಕತೆ, ಕವಿತೆ, ಲಲಿತ ಪ್ರಬಂಧ ಮತ್ತು ಕಾಲೇಜು ವಿದ್ಯಾರ್ಥಿಗಳಿಗಾಗಿ ನಡೆಸಿದ ಅಮರಸುಳ್ಯ ಸ್ವಾತಂತ್ರ್ಯ ಹೋರಾಟದ ಬಗ್ಗೆ ಪ್ರಬಂಧ ಸ್ಪರ್ಧೆ – 2022.

154. 29.08.2022 : ಅರೆಭಾಷೆ ಸುಪ್ರಭಾತ ಧ್ವನಿಮುದ್ರಣ ಬಿಡುಗಡೆ.

155. 29.08.2022 : ಅರೆಭಾಷೆ ಸೋಬಾನೆ ಧ್ವನಿಮುದ್ರಣ ಬಿಡುಗಡೆ.

156. 15.09.2022 : ಕರ್ನಾಟಕ ರಾಜ್ಯ ಚಲನಚಿತ್ರ ಪ್ರಶಸ್ತಿ ಮತ್ತು ಗುಣಾತ್ಮಕ ಚಲನಚಿತ್ರಗಳ ಸಹಾಯಧನಕ್ಕೆ ಅರೆಭಾಷೆಯನ್ನು ಪರಿಗಣಿಸುವ ಬಗೆಗೆ ಆಯುಕ್ತರು, ಕರ್ನಾಟಕ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಗೆ ಅಗತ್ಯ ದಾಖಲೆಗಳ ಸಲ್ಲಿಕೆ.

157. 21.09.2022 : ಅರೆಭಾಷೆ ಅಕಾಡೆಮಿ ಪ್ರಕಟಿತ ಪುಸ್ತಕಗಳ ಗ್ರಾಮ ಪಂಚಾಯಿತಿ ಲೈಬ್ರರಿ ವಿತರಣೆ.

158. 25.09.2022 : ಅರೆಭಾಷೆ ವಿಶ್ವಕೋಶ ಬಿಡುಗಡೆ, ವಿಚಾರ ಸಂಕಿರಣ, ಯಕ್ಷಗಾನ ತಾಳಮದ್ದಳೆ ಪ್ರದರ್ಶನ, ನಮ್ಮನೆ, ಲಗ್ಗೆರೆ ಬೆಂಗಳೂರು. ವಿಷಯ : **ನಗರ ಮತ್ತು ಅವ್ವಬಾಸೆ.** ಸಂಪನ್ಮೂಲ ವ್ಯಕ್ತಿ : ಆಶ್ವಿನಿ ರಾಜೇಶ್ ತೇನನ. ವಿಷಯ: **ಅರೆಭಾಷೆ ಮತ್ತು ಅಭಿವ್ಯಕ್ತಿ ಮಾಧ್ಯಮ**. ಸಂಪನ್ಮೂಲ ವ್ಯಕ್ತಿ : ಜಬ್ಬರ್ ಸಮೋ. ಸಮನ್ವಯಕಾರರು : ಪ್ರೊ. ಚೆ. ರಾಮಸ್ವಾಮಿ.

159. 07.10.2022 : ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಕಚೇರಿಯಲ್ಲಿ ಅಕಾಡೆಮಿ ಲೈಬ್ರರಿ ಉದ್ಘಾಟನೆ, ಅಕಾಡೆಮಿ ಕಚೇರಿ, ಮಡಿಕೇರಿ.

160. 12.10.2022 : ಪ್ರೊ. ಕೋಡಿ ಕುಶಾಲಪ್ಪ ಗೌಡ ಸಾಕ್ಷ್ಯಚಿತ್ರ ಬಿಡುಗಡೆ. ರಂಗಮನೆ, ಸುಳ್ಯ

161. 13.10.2022 : ಅರೆಭಾಷೆ ವಿಶ್ವಕೋಶ ಮತ್ತು ಕವಿತೆ, ಪ್ರಬಂಧ ಸಂಕಲನಗಳು, ಅರೆಬಾಸೆ ಸಾದಕರ ಮಾಲೆ, ಕಥಾ ಸಂಕಲನ, ಅರೆಬಾಸೆ ಕೈಪಿಡಿ, ಗ್ರಾಂಥಿಕ ಕನ್ನಡ ಮತ್ತು ಅರೆಭಾಷೆ ತೌಲನಿಕ ಗ್ರಂಥ, ಹೊತ್ತ್‌ಕಂತ್‌ಕನ ನಾಟಕ ಪುಸ್ತಕಗಳ ಬಿಡುಗಡೆ. ಭಾರತೀಯ ವಿದ್ಯಾಭವನ, ಮಡಿಕೇರಿ.

162. 14.10.2022 : ಅರೆಭಾಷೆ ಅಕಾಡೆಮಿ ಮೂರು ವರ್ಷದ ಸಾಧನೆ ಪುಸ್ತಕಗಳ ಬಿಡುಗಡೆ ಮತ್ತು ಮಾಧ್ಯಮದವರೊಂದಿಗೆ ಸಂವಾದ. ಮಡಿಕೇರಿ.

ತಾ. : 25–12–2019

## ಸಚಿವರೊಂದಿಗೆ ಹೊಸ ಅಧ್ಯಕ್ಷರು ಮತ್ತು ಸದಸ್ಯರ ಭೇಟಿ





ಅರೆಭಾಷೆ ಸಾಹಿತ್ಯ, ಸಂಸ್ಕೃತಿ ಅಕಾಡೆಮಿ ಅಧ್ಯಕ್ಷ, ಸದಸ್ಯರ ಅಧಿಕಾರ ಸ್ವೀಕಾರ ಕಾರ್ಯಕ್ರಮ

### ಪ್ರಾದೇಶಿಕ ಭಾಷೆ ಉಳಿಸುವ ಕಾರ್ಯಕ್ಕೆ ಒತ್ತು

ಪ್ರಜಾವಾಣಿ ವಾರ್ತೆ

ಮಡಿಕೇರಿ: ಕರ್ನಾಟಕ ಅರೆಭಾಷೆ ಸಾಹಿತ್ಯ ಸಂಸ್ಕೃತಿ ಅಕಾಡೆಮಿಯ ನೂತನ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ ಅವರು ಅರೆಭಾಷೆ ಅಕಾಡೆಮಿ ಕಚೇರಿಯಲ್ಲಿ ಬುಧವಾರ ನಡೆದ ಕಾರ್ಯಕ್ರಮದಲ್ಲಿ ಅಧಿಕಾರ ಸ್ವೀಕರಿಸಿದರು.

ಸದಸ್ಯರಾದ ಬೈತಡ್ಕ ಜಾನಕಿ, ಸ್ಮಿತಾ ಅಮೃತರಾಜ್, ಆನಂದ್ ದಂಬೆಕೋಡಿ, ಪ್ರೇಮಾ ರಾಘವಯ್ಯ ಮತ್ತು ಎ.ಪಿ. ಧನಂಜಯ ಅವರೂ ಅಧಿಕಾರ ವಹಿಸಿಕೊಂಡರು.

ಲಕ್ಷ್ಮೀನಾರಾಯಣ ಕಜೆಗದ್ದೆ ಮಾತನಾಡಿ, 'ಪ್ರಾದೇಶಿಕ ಭಾಷೆಗಳನ್ನು ಉಳಿಸಿ ಬೆಳೆಸುವುದು ಪ್ರಸಕ್ತ ದಿನಗಳಲ್ಲಿ ಅತ್ಯಗತ್ಯವಾಗಿದೆ. ಹಿರಿಯರ ತಜ್ಞರ ಸಲಹೆ ಸೂಚನೆಗಳನ್ನು ಪಡೆದುಕೊಂಡು ಅರೆಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸುವ ಕಾರ್ಯಕ್ರಮಕ್ಕೆ ಒತ್ತು ನೀಡಲಾಗುವುದು' ಎಂದು ತಿಳಿಸಿದರು.

ಹೊರ ಜಿಲ್ಲೆ, ರಾಜ್ಯದಲ್ಲಿರುವ ಜನಾಂಗದವರನ್ನು ಒಂದುಗೂಡಿಸಲು ಹಲವು ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವ ಚಿಂತನೆ ಇದೆ. ಸಾಹಿತ್ಯ, ಸಂಸ್ಕೃತಿಯನ್ನು ಉಳಿಸಿ ಬೆಳೆಸುವುದರೊಂದಿಗೆ ವಿದ್ಯಾರ್ಥಿಗಳಿಗಾಗಿ ಹಲವಾರು ಕಾರ್ಯಕ್ರಮ ಆಯೋಜಿಸಲು ಪ್ರಯತ್ನಿಸಲಾಗುವುದು ಎಂದು ಹೇಳಿದರು.

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಪಂಚ ಭಾಷಾ ಅಕಾಡೆಮಿಗಳು ಒಟ್ಟುಗೂಡಿಸಿ ಕಲೆ, ಸಂಸ್ಕೃತಿ, ಸಾಹಿತ್ಯಕ್ಕೆ ಸಂಬಂಧಿಸಿದ ಹಲವಾರು ಕಾರ್ಯಕ್ರಮಗಳನ್ನು ಆಯೋಜಿಸುವ ಬಗ್ಗೆ ಚರ್ಚಿಸಲಾಗುವುದು ಎಂದರು.

ಅಕಾಡೆಮಿಯ ಸದಸ್ಯ ದಂಬೆಕೋಡಿ ಆನಂದ ಮಾತನಾಡಿ, 'ಪ್ರತಿಯೊಬ್ಬರೂ ಪರಿಶುದ್ಧ ಮನಸ್ಸಿನಿಂದ ಕೆಲಸ ಮಾಡಿದರೆ ಸಂಸ್ಕೃತಿ ಹಾಗೂ ಅಕಾಡೆಮಿಯ ಏಳಿಗೆ ಸಾಧ್ಯ. ಸಭೆ ನಡೆಸಿ ಪ್ರಚಾರ ಗಿಟ್ಟಿಸಿಕೊಳ್ಳುವ ಬದಲು ನಿಷ್ಠೆಯಿಂದ ಕಾರ್ಯ ನಿರ್ವಹಿಸಿದರೆ ಅರ್ಥಪೂರ್ಣ ಎನಿಸಿಕೊಳ್ಳುತ್ತದೆ' ಎಂದು ಅಭಿಪ್ರಾಯಪಟ್ಟರು.

ಸ್ಮಿತಾ ಅಮೃತರಾಜ್ ಮಾತನಾಡಿ, 'ಅರೆಭಾಷೆಯು ಶ್ರೀಮಂತ ಭಾಷೆಯಾಗಿದ್ದು, ಈ ಭಾಷೆಯನ್ನು ಉಳಿಸಿ ಬೆಳೆಸಿದಲ್ಲಿ ಸ್ಥಳೀಯ ಕಲೆ, ಸಾಹಿತ್ಯ, ಸಂಸ್ಕೃತಿ ಉಳಿಸಲು ಸಾಧ್ಯವಾಗಿರುವುದರಿಂದ, ಹೊಸ ಚಿಂತನೆಯೊಂದಿಗೆ ಉತ್ತಮ ಕಾರ್ಯಕ್ರಮಗಳನ್ನು ಆಯೋಜಿಸಲು ಶ್ರಮಿಸಲಾಗುವುದು' ಎಂದು ಹೇಳಿದರು.

ಸದಸ್ಯೆ ಬೈತಡ್ಕ ಜಾನಕಿ ಮಾತನಾಡಿ, 'ಅಕಾಡೆಮಿ ಸದಸ್ಯ... ಮಾಡಿರುವುದು ... ಜವಾಬ್ದಾರಿ ಕ... ಸಂಬಂಧಿಸಿ... ಹಾಡುಗಳನ... ಶ್ರಮಿಸ... ಇ... ಸಂಘ... ಒಕ್ಕೂ... 1,800 ... ಅಕಾಡೆಮಿ ... ತೊಡಗಿಸಿಕೊ...

ಮಡಿಕೇರಿಯ ಅರೆಭಾಷೆ ಅಕಾಡೆಮಿ ಕಚೇರಿಯಲ್ಲಿ ಬುಧವಾರ ಅರೆಭಾಷೆ ಸಾಹಿತ್ಯ ಸಂಸ್ಕೃತಿ ಅಕಾಡೆಮಿ ಅಧ್ಯಕ್ಷ, ಸದಸ್ಯರ ಅಧಿಕಾರ ಸ್ವೀಕಾರ ಕಾರ್ಯಕ್ರಮ ನಡೆಯಿತು

#### 'ಅರೆಭಾಷೆ ಕಣ್ಮರೆ ಆಗದಂತೆ ಕ್ರಮ'

ಅಕಾಡೆಮಿಯಲ್ಲಿ 3 ದಶಕಗಳ ಅನುಭವಿಗಳು ಇದ್ದಾರೆ. ಬೇರೆ ಭಾಷೆಗಳ ಪ್ರಭಾವದಿಂದ ಅರೆಭಾಷೆ ಕಣ್ಮರೆಯಾಗದಂತೆ ವಿಭಿನ್ನ ಕಾರ್ಯಕ್ರಮಗಳನ್ನು ನಡೆಸಬೇಕು. ಹಿರಿಯರ ಜತೆಗೂಡಿ ಸಾಮರಸ್ಯದ ಹೆಜ್ಜೆ ಇಡಬೇಕಾಗಿದೆ. ಜತೆಗೆ ಮಕ್ಕಳಲ್ಲಿ ಭಾಷೆ, ಸಂಸ್ಕೃತಿಯ ಬಗ್ಗೆ ಅರಿವು ಮೂಡಿಸಬೇಕು ಎಂದು ಸದಸ್ಯ ಎ.ಪಿ.ಧನಂಜಯ ಹೇಳಿದರು.

**ಮುಖ್ಯಾಂಶಗಳು**

- ಹೊರ ರಾಜ್ಯ, ಜಿಲ್ಲೆಯಲ್ಲಿರುವರಿಗೆ ಕಾರ್ಯಕ್ರಮ
- ಹಲವು ವಿಶೇಷ ಕಾರ್ಯಕ್ರಮಗಳಿಗೆ ಪ್ರಯತ್ನ
- ಮಕ್ಕಳಲ್ಲಿ ಭಾಷೆ, ಸಂಸ್ಕೃತಿಯ ಬಗ್ಗೆ ಅರಿವು

ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ಮಕ್ಕಳಿಗೆ, ಯುವಕರಿಗೆ ತಿಳಿಸುವ ಮೂಲಕ ಮುಂದಿನ ತಲೆಮಾರಿಗೆ ಉಳಿಸಲು ಶ್ರಮಿಸಲಾಗುವುದು.
**ಲಕ್ಷ್ಮೀನಾರಾಯಣ ಕಜೆಗದ್ದೆ,** ಅಧ್ಯಕ್ಷ, ಅರೆಭಾಷೆ ಅಕಾಡೆಮಿ

ಕನ್ನಡ ಭಾಷೆಯ ಜತೆಗೆ ಇತರ ಉಪ ಭಾಷೆಗಳನ್ನು

ವಿಧಾನ ಸೌಧ
ಬೆಂಗಳೂರು

ತಾ. : 25–12–2019

## ಕೆ.ವಿ.ಜಿ. ಸುಳ್ಯ ಹಬ್ಬದಲ್ಲಿ ಎಮ್ಮಮನೆ ಅಂಗಳದಿ ನಾಟಕ ಪ್ರಾಯೋಜನೆ

ನಿರ್ದೇಶನ– ಲೋಕೇಶ್ ಊರುಬೈಲು



ತಾ. : 01–02–2020

## ಕೊಡಗು ಜಿಲ್ಲಾ 14ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ ಪ್ರಾಯೋಜನೆ.




ಸ್ಥಳ:
ನಿಡ್ತ, ಸೋಮವಾರಪೇಟೆ
ತಾಲೂಕು

ತಾ. : 03-02-2020

## ಅರೆಭಾಷೆ ರಂಗ ತರಬೇತಿ ಶಿಬಿರ ಉದ್ಘಾಟನಾ ಸಮಾರಂಭ

## ನಾಟಕ- 'ಸಾಹೇಬ್ರು ಬಂದವೇ'

**ನಿರ್ದೇಶನ- ಜೀವನ್ ರಾಂ ಸುಳ್ಯ**






ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ
ಆಶ್ರಯಲಿ
ಒಂದು ತಿಂಗಳ ರಾಜ್ಯಮಟ್ಟದ

**ಅರೆಭಾಷೆ ರಂಗತರಬೇತಿ ಶಿಬಿರ**

**ಉದ್ಘಾಟನಾ ಸಮಾರಂಭ**

ಜಾಗೆ : ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರ ಹಳೆಗೇಟು, ಸುಳ್ಯ, ದ. ಕ.
ದಿನಾಂಕ : 03-02-2020ನೇ ಸೋಮವಾರ, ಹಿಂಬೊತ್ತು ಗಂಟೆ 5-00

ಸಭಾಧ್ಯಕ್ಷರ್ : ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಅಧ್ಯಕ್ಷರ್, ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಉದ್ಘಾಟಕರ್ : ಶ್ರೀ ತುಕಾರಾಂ ಏನೆಕಲ್ಲು, ಹಿರಿಯ ರಂಗಕರ್ಮಿಗ
ಮುಖ್ಯ ನೆಂಟ್ರ್ : ಡಾ। ಪ್ರಭಾಕರ ಶಿಶಿಲ, ವಿಶ್ರಾಂತ ಪ್ರಾಂಶುಪಾಲರ್
: ಶ್ರೀ ಮೋಹನ್‌ರಾಂ ಸುಳ್ಳಿ
ಅಧ್ಯಕ್ಷರ್, ಗೌಡರ ಯುವ ಸೇವಾ ಸಂಘ (ರಿ.) ಸುಳ್ಯ
: ಶ್ರೀ ಜಯಪ್ರಕಾಶ ಯಂ. ಯಸ್., ಹಿರಿಯ ರಂಗಕರ್ಮಿಗ
ಉಪಸ್ಥಿತಿ : ಶ್ರೀ ಜೀವನ್‌ರಾಂ ಸುಳ್ಯ, ಶಿಬಿರ ನಿರ್ದೇಶಕರ್

*ಪ್ರೀತಿಪೂರ್ವಕ ಸ್ವಾಗತ*

ರಿಜಿಸ್ಟ್ರಾರ್
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಅಧ್ಯಕ್ಷರ್ ಮತ್ತ್ ಸದಸ್ಯರ್‌ಗ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ
ಅಧ್ಯಕ್ಷರ್ : ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ ರಿಜಿಸ್ಟ್ರಾರ್ : ಚಿನ್ನಸ್ವಾಮಿ
ಸದಸ್ಯರ್ : ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಶ್ರೀಮತಿ ಸ್ಮಿತಾ ಅಮೃತರಾಜ್, ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ, ಶ್ರೀ ಧನಂಜಯ ಅಗೋಳಿಕಜೆ, ಶ್ರೀ ದಂಬೆಕೋಡಿ ಯಸ್. ಆನಂದ



### ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಆಶ್ರಯದಲ್ಲಿ ಒಂದು ತಿಂಗಳ ಶಿಬಿರ-ಉದ್ಘಾಟನೆ

**ಅಕಾಡೆಮಿಯ ಗ್ರಹಣ ವಿಮೋಚನೆಯಾಗಿದೆ: ಡಾ। ಶಿಶಿಲ**

ಕರ್ನಾಟಕ ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿಯ ಆಶ್ರಯದಲ್ಲಿ ಒಂದು ತಿಂಗಳ ರಾಜ್ಯಮಟ್ಟದ ಅರೆಭಾಷೆ ರಂಗತರಬೇತಿಯು ಶಿಬಿರವು ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರ ಹಳೆಗೇಟು ಇಲ್ಲಿ ಆರಂಭಗೊಂಡಿದೆ. ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಇದರ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಉದ್ಘಾಟನೆಯನ್ನು ಹಿರಿಯ ರಂಗಕರ್ಮಿ ತುಕಾರಾಂ ಏನೆಕಲ್ಲು ನೆರವೇರಿಸಿದರು. ರಂಗಭೂಮಿ ಕಲಿಕೆಯಿಂದ ಜೀವನದ ಪಾಠ ದೊರೆಯುತ್ತದೆ. ಬದುಕು ಕಟ್ಟುವುದನ್ನು ರಂಗಭೂಮಿ ಕಲಿಸಿಕೊಡುತ್ತದೆ. ರಂಗಭೂಮಿಯ ಪ್ರಬಲ ಮತ್ತು ಪ್ರಭಾವಿ ಮಾಧ್ಯಮವಾದ ನಾಟಕವನ್ನು

ಅರೆಭಾಷೆಯಲ್ಲಿ ನಡೆಸುತ್ತಿರುವುದು ಭಾಷಾ ವಿಸ್ತಾರದ ಕೆಲಸ ಎಂದು ಹೇಳಿದ ತುಕಾರಾಂ ಏನೆಕಲ್ ಅವರು, ಅಕಾಡೆಮಿಯನ್ನು ಜಾತಿಯೊಳಗೆ ಬಂಧಿಸಿಡುವ ಪ್ರವೃತ್ತಿ ಖೇದಕರ ಎಂದರು. ಮುಖ್ಯ ಅತಿಥಿಗಳಾಗಿದ್ದ ವಿಶ್ರಾಂತ ಪ್ರಾಂಶುಪಾಲ ಡಾ. ಪ್ರಭಾಕರ ಶಿಶಿಲ ಮಾತನಾಡಿ, ಇಂತಹ ಕಾರ್ಯಕ್ರಮ ನಡೆಯುವ ಮೂಲಕ ಮೂರು ಅವಧಿಗಳಲ್ಲಿ ಅರೆಭಾಷೆ ಅಕಾಡೆಮಿಯ ಗ್ರಹಣ ವಿಮೋಚನೆಯಾಗಿದೆ. ಭಾಷೆ ಎಲ್ಲ ಗಡಿಗಳನ್ನು ಮೀರಿ ಬೆಳೆಯಬೇಕು ಎಂದರು. ಗೌಡರ ಯುವ ಸೇವಾ ಸಂಘದ ಅಧ್ಯಕ್ಷ ಮೋಹನ್ ರಾಂ ಸುಳ್ಳಿ, ರಂಗ ಕರ್ಮಿ ಎಂ.ಎಸ್. ಜಯಪ್ರಕಾಶ್ ಅತಿಥಿಗಳಾಗಿ ಭಾಗವಹಿಸಿದ್ದರು.

ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರ ಹಳೆಗೇಟು, ಸುಳ್ಯ. ದ.ಕ

ತಾ. : 17-02-2020

## ಮೈಸೂರು ರಂಗಾಯಣದಲ್ಲಿ ಬಹುರೂಪಿ ಕಾರ್ಯಕ್ರಮ

## ಅರೆಭಾಷೆ ಸಾಂಸ್ಕೃತಿಕ ಕಾರ್ಯಕ್ರಮ ಪ್ರಾಯೋಜನೆ

## ರಂಗಾಯಣ, ಮೈಸೂರು.






ರಂಗಾಯಣದ ಕಿಂದರಜೋಗಿಯಲ್ಲಿ ಕೊಡಗಿನ ಅರೆಭಾಷೆ ಗೌಡ ಸಮುದಾಯದ ಮಿಲನ ಭರತ್ ಮತ್ತು ತಂಡದವರು ಜಾನಪದ ನೃತ್ಯ ಪ್ರದರ್ಶನ ನೀಡಿದರು.

### ಜಾನಪದ ಕಲೆಯಿಂದ ಆರೋಗ್ಯ ಅರಿವು

■ ವಿಕ ಸುದ್ದಿಲೋಕ ಮೈಸೂರು

ಆರೋಗ್ಯದ ಬಗ್ಗೆ, ವಿಶೇಷವಾಗಿ ತಾಯಿ-ಮಗು ಆರೋಗ್ಯದ ಬಗ್ಗೆ ಜನಪದ ಹಾಡಿನ ಮೂಲಕ ಅರಿವು ಮೂಡಿಸಲಾಗುವುದು ಎಂದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ ಡಾ.ಆರ್.ವೆಂಕಟೇಶ್ ತಿಳಿಸಿದರು.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ವತಿಯಿಂದ ಜಿಲ್ಲಾ ಪಂಚಾಯಿತಿ ಸಿಇಒ ಕಚೇರಿಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಕಾರ್ಯಕ್ರಮಗಳ ಬಗ್ಗೆ ಮಾಹಿತಿ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ ಸಂವಹನ ಕಾರ್ಯಚಟುವಟಿಕೆಗಳನ್ನು ಆಯೋಜಿಸುವ ಸಂಬಂಧ ಸಿಇಒ ಕೆ. ಜ್ಯೋತಿ ಮತ್ತು ಡಿಎಚ್‌ಒ ವೆಂಕಟೇಶ್ ಅಧ್ಯಕ್ಷತೆಯಲ್ಲಿ ಸಭೆ ನಡೆಸಲಾಯಿತು.

2019-20ನೇ ಸಾಲಿನ ಎಸ್ಸಿಪಿ ಮತ್ತು ಟಿಎಸ್ಪಿ ಅಡಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಗಿರಿಜನ ಮತ್ತು ಬುಡಕಟ್ಟು ಜನಾಂಗದವರಿಗೆ ನೀಡಲಾದ ಅನುದಾನವನ್ನು ಜಾನಪದ ಕಾರ್ಯಕ್ರಮಗಳ ಮೂಲಕ ಜಿಲ್ಲೆಯಲ್ಲಿ ಸ್ಥಳೀಯ ಸಮಸ್ಯೆಗಳಿಗೆ ಅನುಗುಣವಾಗಿ ತಾಯಿ-ಮಗುವಿನ ಆರೋಗ್ಯ ಕುರಿತು ಆದ್ಯತೆ ನೀಡಲು ಜಾನಪದ ಕಲಾವಿದರಿಂದ ಅರಿವು ಮೂಡಿಸುವುದು ಎಂದು ವೆಂಕಟೇಶ್ ತಿಳಿಸಿದರು.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಯೋಜನೆಗಳ ಬಗ್ಗೆ ತಾಯಂದಿರ ಸಭೆ, ಪೌಷ್ಟಿಕ ಆಹಾರದ ಪ್ರಾತ್ಯಕ್ಷತಾ ಶಿಬಿರ ಜಾನಪದ ಕಾರ್ಯಕ್ರಮ, ತಾತ್ಕಾಲಿಕ ಹೋರ್ಡಿಂಗ್ಸ್ ನಿರ್ಮಿಸಿ ಅದಕ್ಕೆ ಪರಿಸರ ಸ್ನೇಹಿ ಪ್ಲೆಕ್ಸ್ ಅಳವಡಿಸುವುದು, ಗೋಡೆ ಬರಹ, ಆರೋಗ್ಯ ಮೇಳವನ್ನು ಸಾರ್ವಜನಿಕರು ಹೆಚ್ಚಾಗಿ ಸೇರುವ ಸ್ಥಳಗಳಲ್ಲಿ ಹಾಗೂ ಕ್ಷೇತ್ರ ಎಲ್ಲಾ ಹಳ್ಳಿಗಳು ಜನರು ಸೇವೆ ಪಡೆಯುವಂತೆ ಸದರಿ ಮೇಳವನ್ನು ಮಾ.15 ರ ಅಂತ್ಯದೊಳಗೆ ಕಡ್ಡಾಯವಾಗಿ ಆಯೋಜಿಸಲು ಅಧಿಕಾರಿಗಳಿಗೆ ಸೂಚಿಸಲಾಯಿತು.

ರಂಗಾಯಣ ಮೈಸೂರು

# ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ, ಸುಬ್ರಹ್ಮಣ್ಯದಲ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ ಉದ್ಘಾಟನಾ ಸಮಾರಂಭ






ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮಡಿಕೇರಿ
ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ, ಸುಬ್ರಹ್ಮಣ್ಯ,
ಕಡಬ ತಾಲೂಕು ದ. ಕ. - 574238
ಐ ಕ್ಯೂ. ಎ. ಸಿ. ಘಟಕ ಮತ್ತು ಕನ್ನಡ ವಿಭಾಗದ ಕೂಡ್‌ಕಟ್ಟ್‌ಲಿ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ
ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ ಸುಬ್ರಹ್ಮಣ್ಯ ಇದರ

**ಉದ್ಘಾಟನಾ ಸಮಾರಂಭ**

ಜಾಗೆ : ಕಾಲೇಜು ಸಭಾಂಗಣ
ದಿನ : 06-02-2020ರ ಗುರುವಾರ ಹೊತ್ತು : 2-30

ಸಭಾಧ್ಯಕ್ಷರ್ : ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಅಧ್ಯಕ್ಷರ್, ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಉದ್ಘಾಟಕರ್ : ಶ್ರೀ ಶಿವರಾಮ ಗೌಡ ಕುಂಞೇಟಿ
ನಿವೃತ್ತ ಮುಖ್ಯೋಪಾಧ್ಯಾಯರ್,

ಮುಖ್ಯ ನೆಂಟ್ರ್‌ಗ : ಶ್ರೀ ಚಂದ್ರಶೇಖರ ಪೇರಾಲ್, ಉಪ ಕಾರ್ಯನಿರ್ವಹಣಾಧಿಕಾರಿ,
ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನ ಸುಬ್ರಹ್ಮಣ್ಯ
ಪ್ರೊ. ಉದಯ ಕುಮಾರ್ ಕೆ.
ಪ್ರಾಂಶುಪಾಲರ್, ಕೆ. ಯಸ್. ಯಸ್. ಕಾಲೇಜು ಸುಬ್ರಹ್ಮಣ್ಯ

ಸ್ವಾಗತ ಬಯಸುವ

ರಿಜಿಸ್ಟ್ರಾರ್
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಅಧ್ಯಕ್ಷರ್ ಮತ್ತ್ ಸದಸ್ಯರ್‌ಗ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಅಧ್ಯಕ್ಷರ್ ಮತ್ತ್ ಸದಸ್ಯರ್‌ಗ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ
ಕೆ.ಯಸ್. ಯಸ್. ಕಾಲೇಜು ಸುಬ್ರಹ್ಮಣ್ಯ

ಪ್ರೊ. ಬಾಲಕೃಷ್ಣ ಪೈ.
ಐ.ಕ್ಯೂ.ಎ.ಸಿ. ಸಂಯೋಜಕರು



## 6ಕ್ಕೆ ಅರೆಭಾಷೆ ಸಂಸ್ಕೃತಿ, ಸಾಹಿತ್ಯ ಸಂಘ ಉದ್ಘಾಟನೆ

**ವಿಕ ಸುದ್ದಿಲೋಕ** ಮಡಿಕೇರಿ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಯಿಂದ ಒಂದು ತಿಂಗಳ ರಾಜ್ಯಮಟ್ಟದ ಅರೆಭಾಷೆ ರಂಗ ತರಬೇತಿ ಶಿಬಿರ ಸುಳ್ಯದ ರಂಗಮನೆಯಲ್ಲಿ ಫೆ.3 ರಿಂದ ಆರಂಭವಾಗಿದೆ ಎಂದು ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ ತಿಳಿಸಿದ್ದಾರೆ.

ನಗರದಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿ, " ರಾಜ್ಯದ ವಿವಿಧ ಭಾಗಗಳಿಂದ ಆಗಮಿಸಲಿರುವ 15 ಸದಸ್ಯರಿಗೆ ರಂಗ ತರಬೇತಿ ನೀಡಿ ಮುಂದೆ ಅರೆಭಾಷೆ ನಾಟಕ ಪ್ರದರ್ಶನ ಮಾಡುವುದು ಅಕಾಡೆಮಿ ಉದ್ದೇಶವಾಗಿದೆ. ಹಿರಿಯ ರಂಗ ನಿರ್ದೇಶಕ ಸುಳ್ಯದ ಜೀವನರಾಂ ನಿರ್ದೇಶನದಲ್ಲಿ ಶಿಬಿರ ನಡೆಯುತ್ತಿದೆ " ಎಂದು ತಿಳಿಸಿದರು.

ಸುಬ್ರಮಣ್ಯದ ಕುಕ್ಕೆಶ್ರೀ ಸುಬ್ರಮಣ್ಯೇಶ್ವರ ಮಹಾವಿದ್ಯಾಲಯದಲ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘದ ಉದ್ಘಾಟನಾ ಸಮಾರಂಭವನ್ನು ಫೆ.6ರಂದು ಕಾಲೇಜು ಸಭಾಂಗಣದಲ್ಲಿ ಆಯೋಜಿಸಲಾಗಿದೆ.

**23ರಂದು ಅರೆಭಾಷೆ ಸಾಹಿತ್ಯ ಸಮ್ಮೇಳನ**
**ಸೋಮವಾರಪೇಟೆ ತಾಲೂಕಿನ ಆಲೂರು ಸಿದ್ದಾಪುರ ಗೌಡ ಸಮಾಜದ ಸಹಯೋಗದೊಂದಿಗೆ ಸಂಗಯ್ಯನಪುರ ಗ್ರಾಮದಲ್ಲಿ ಫೆ.23ರಂದು ಅರೆಭಾಷೆ ಸಾಹಿತ್ಯ ಸಮ್ಮೇಳನ ಆಯೋಜಿಸಲಾಗಿದೆ. ಸಮ್ಮೇಳನದ ಅಧ್ಯಕ್ಷರಾಗಿ ಅರೆಭಾಷೆ ಕವಿ ಹಾಗೂ ಅಕಾಡೆಮಿ ಗೌರವ ಪುರಸ್ಕೃತರಾದ ಹೊದ್ದೆಟ್ಟಿ ಭವಾನಿ ಶಂಕರ ಅವರನ್ನು ಆಯ್ಕೆ ಮಾಡಲಾಗಿದೆ ಎಂದು ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾದ ಲಕ್ಷ್ಮೀನಾರಾಯಣ ಕಜೆಗದ್ದೆ ತಿಳಿಸಿದ್ದಾರೆ**

ಶಿವರಾಮಗೌಡ ಕುಂಞಟಿ ಕಾರ್ಯಕ್ರಮವನ್ನು ಉದ್ಘಾಟಿಸಲಿದ್ದು, ಮುಖ್ಯ ಅತಿಥಿಗಳಾಗಿ ಕುಕ್ಕೆಶ್ರೀ ಸುಬ್ರಮಣ್ಯ ದೇವಸ್ಥಾನದ ಪೇರಾಲು ಉಪ ಕಾರ್ಯನಿರ್ವಹಣಾಧಿಕಾರಿ ಚಂದ್ರಶೇಖರ್ ಮತ್ತು ಕಾಲೇಜಿನ ಪ್ರಾಂಶುಪಾಲರಾದ ಉದಯ್ಕುಮಾರ್ ಪಾಲ್ಗೊಳ್ಳಲಿದ್ದಾರೆ ಎಂದು ಮಾಹಿತಿ ನೀಡಿದರು.

ಅವಂದೂರು ಗ್ರಾಮದ ಪಟ್ಟಡ ಕುಟುಂಬಸ್ಥರ ಜೀರ್ಣೋದ್ಧಾರ ಸಂಘದ ಸಹಯೋಗದಲ್ಲಿ ಫೆ.8ರಂದು ಅರೆಭಾಷೆ ಸಂಸ್ಕೃತಿಲಿ ಕೆಡ್ಡಾಸ ಹಬ್ಬ ಎಂಬ ಕಾರ್ಯಕ್ರಮವನ್ನು ಆಯೋಜಿಸಲಾಗಿದೆ ಎಂದು ತಿಳಿಸಿದರು.

ಚೆಂಬು ಗ್ರಾಮದ ಶ್ರೀ ಭಗವಾನ್ ಸಂಘ(ರಿ) ಊರುಬೈಲು ಹಾಗೂ ಸ್ವಾಮಿ ವಿವೇಕಾನಂದ ಯುವಕ ಮಂಡಲದ ಸಹಯೋಗದೊಂದಿಗೆ ಅರೆಭಾಷೆ ಸಿರಿ ಸಂಸ್ಕೃತಿ ಮತ್ತು ಕೆಡ್ಡಸ ಗೌಜಿ ಕಾರ್ಯಕ್ರಮವನ್ನು ಚೆಂಬು ಗ್ರಾಮದಲ್ಲಿ ಫೆ.16ರಂದು ಆಯೋಜಿಸಲಾಗಿದೆ. ಸಂಜೆ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಲಿದ್ದು ಅರೆಭಾಷೆಯಲ್ಲಿ ಯಕ್ಷಗಾನ ತಾಳ ಮದ್ದಳೆ ಹೆಸರಾಂತ ಯಕ್ಷಗಾನ ಅರ್ಥದಾರಿ ಜಬ್ಬಾರ್ ಸಮೊ ಸಂಪಾಜೆ ಅವರಿಂದ ಬಾಣದ ಪಾಲ(ಶರ ಸೇತು) ಯಕ್ಷಗಾನ ನಡೆಯಲಿದೆ ಎಂದರು.

ಅಕಾಡೆಮಿ ಸದಸ್ಯರಾದ ಬೈತಡ್ಕ ಜಾನಕಿ ಬೆಳ್ಯಪ್ಪ, ಧನಂಜಯ ಅಗೋಳಿಕಜೆ, ಚೊಕ್ಕಾಡಿ ಪ್ರೇಮ ರಾಘವಯ್ಯ, ಸ್ಮಿತಾ ಅಮೃತರಾಜ್ ಉಪಸ್ಥಿತರಿದ್ದರು.

**ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ, ಸುಬ್ರಹ್ಮಣ್ಯ**

ತಾ. : 08–02–2020

# ಅರೆಭಾಷೆ ಸಂಸ್ಕೃತಿ ಕೆಡ್ಡಸ ಹಬ್ಬ
# ವಿಚಾರ ಮಂಡನೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ









## ಅರೆಭಾಷೆ ಸಂಸ್ಕೃತಿ ಸಂಭ್ರಮಾಚರಣೆ

**ಅವಂದೂರು ಐನ್‌ಮನೆಯಲ್ಲಿ ಕಿಡ್ದಾಸ ಹಬ್ಬದ ರಂಗು | ಕವಿಗೋಷ್ಠಿ, ವಿಚಾರಗೋಷ್ಠಿ | ಸಾಂಸ್ಕೃತಿಕ ವೈಭವ**

**ಹಬ್ಬ ಆಚರಣೆಯ ಅರಿವು**

**ಡಾ ಕೋರನ ಸರಸ್ವತಿ ಪ್ರಕಾಶ್**
ವಿಷಯ–ಅರೆಭಾಷೆ ಸಂಸ್ಕೃತಿಲಿ ಕಿಡ್ದಾಸ ಹಬ್ಬದ ಮಹತ್ವ

**ಶ್ರೀ ಪಟ್ಟಡ ಉಲ್ಲಾಸ**
ವಿಷಯ –ನಮ್ಮ ಊರ್ ನಮ್ಮ ಐನ್ ಮನೆ

**ಪಟ್ಟಡ ದೊಡ್ಡಮನೆ ಆವರಣ, ಅವಂದೂರು**

# ಎರಡನೇ ಅರೆಭಾಷೆ ಸಾಹಿತ್ಯ ಸಮ್ಮೇಳನ 2020

**ಮೆರವಣಿಗೆ, ವಸ್ತು ಪ್ರದರ್ಶನ, ಪುಸ್ತಕ ಪ್ರಸರ್ಶನ, ಅರೆಭಾಷೆ ಸಾಹಿತ್ಯ ವಿಚಾರ ಗೋಷ್ಠಿ, ಅರೆಭಾಷೆ ಹಾಡುಗಳ ಗಾಯನ, ಅರೆಭಾಷೆ ಕವಿಗೋಷ್ಠಿ, ಸನ್ಮಾನ ಸಮಾರಂಭ,**









**ಆಲೂರು ಸಿದ್ದಾಪುರ, ಸೋಮವಾರಪೇಟೆ**



ತಾ. : 14-03-2020

# 40 ದಿನಗಳ ರಾಜ್ಯಮಟ್ಟದ ಅರೆಭಾಷೆ ನಾಟಕ 'ಸಾಹೇಬ್ರು ಬಂದವೇ' ರಂಗ ಶಿಬಿರ ಸಮಾರೋಪ



**ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರ ಹಳೆಗೇಟು, ಸುಳ್ಯ, ದ.ಕ**

## ಅರೆಭಾಷೆ ರಂಗ ಶಿಬಿರದ ಸಮಾರೋಪ

ಮಡಿಕೇರಿ, ಮಾ. 8: ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಯಿಂದ 40 ದಿನಗಳ ರಾಜ್ಯ ಮಟ್ಟದ ಅರೆಭಾಷೆ ರಂಗ ಶಿಬಿರದ ಸಮಾರೋಪ ಸಮಾರಂಭ ಹಾಗೂ ಅರೆಭಾಷೆ ನಾಟಕ ರಂಗಪಯಣ 'ಸಾಹೇಬ್ರು ಬಂದವೇ!' ಅರೆಭಾಷೆ ನಾಟಕ ಉದ್ಘಾಟನಾ ಕಾರ್ಯಕ್ರಮವು ತಾ. 14 ರಂದು ಸಂಜೆ 6 ಗಂಟೆಗೆ ಸುಳ್ಯ ತಾಲೂಕಿನ ಹಳೆಗೇಟು ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರದಲ್ಲಿ ನಡೆಯಲಿದೆ.

ಸುಳ್ಯ ವಿಧಾನಸಭಾ ಕ್ಷೇತ್ರದ ಶಾಸಕ ಎಸ್. ಅಂಗಾರ, ಕನ್ನಡ ಮತ್ತು ಸಂಸ್ಕೃತಿ, ಪ್ರವಾಸೋದ್ಯಮ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಸಚಿವರಾದ ಸಿ.ಟಿ. ರವಿ, ಸುಳ್ಯ ಗೌಡರ ಯುವ ಸೇವಾ ಸಂಘದ ಪೂರ್ವಾಧ್ಯಕ್ಷ ದಿನೇಶ್ ಮಡಪ್ಪಾಡಿ, ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರದ ಅಧ್ಯಕ್ಷರು ಹಾಗೂ ಶಿಬಿರದ ನಿರ್ದೇಶಕ ಜೀವನ್ ರಾಂ, ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ ಸೇರಿದಂತೆ ಇತರರು ಪಾಲ್ಗೊಳ್ಳಲಿದ್ದಾರೆ.

(6)

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ**

40 ದಿನಗಳ ರಾಜ್ಯಮಟ್ಟದ

**ಅರೆಭಾಷೆ ರಂಗ ಶಿಬಿರ-ಸಮಾರೋಪ**

**ಅರೆಭಾಷೆ ನಾಟಕ**
**ರಂಗಪಯಣ ಉದ್ಘಾಟನೆ**

ಜಾಗೆ : ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರ ಹಳೆಗೇಟು, ಸುಳ್ಯ, ದ. ಕ.

ದಿನ : 14-03-2020 ಶನಿವಾರ, ಹಿಂಬೊತ್ತು ಗಂಟೆ 6-00

ಸಭಾಧ್ಯಕ್ಷರ್ : ಶ್ರೀ ಎಸ್. ಅಂಗಾರ
ಶಾಸಕರ್, ಸುಳ್ಯ ವಿಧಾನಸಭಾ ಕ್ಷೇತ್ರ

ರಂಗಪಯಣದ ಉದ್ಘಾಟಕರ್ : ಶ್ರೀ ಸಿ.ಟಿ. ರವಿ ಸಚಿವರ್, ಕನ್ನಡ ಮತ್ತು ಸಂಸ್ಕೃತಿ, ಪ್ರವಾಸೋದ್ಯಮ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ

ನಂಟ್ರಗ : ಶ್ರೀ ದಿನೇಶ್ ಮಡಪ್ಪಾಡಿ ಪೂರ್ವಾಧ್ಯಕ್ಷರ್,
ಗೌಡರ ಯುವ ಸೇವಾ ಸಂಘ (ರಿ.) ಸುಳ್ಯ

ಉಪಸ್ಥಿತಿ : ಶ್ರೀ ಜೀವನ್‌ರಾಂ ಸುಳ್ಯ, ಶಿಬಿರ ನಿರ್ದೇಶಕರ್
ಅಧ್ಯಕ್ಷರ್, ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರ

— ಪ್ರೀತಿಪೂರ್ವಕ ಸ್ವಾಗತ ಬಯಸುವೊವು —

ಚಿನ್ನಸ್ವಾಮಿ
ರಿಜಿಸ್ಟ್ರಾರ್

ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಅಧ್ಯಕ್ಷರ್

ಸದಸ್ಯರ್ : ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಶ್ರೀಮತಿ ಸ್ಮಿತಾ ಅಮೃತರಾಜ್, ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ, ಶ್ರೀ ಧನಂಜಯ ಅಗೋಳಿಕಜೆ, ಶ್ರೀ ದಂಬೆಕೋಡಿ ಯಸ್. ಆನಂದ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ

ಸಹಕಾರ : **ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು**

ತಾ. : 18-08-2020

# ಯಕ್ಷಗಾನ ತಾಳಮದ್ದಲೆ. 'ಬಾಣದ ಪಾಲ' ಧ್ವನಿ ಮುದ್ರಣ ಕಾರ್ಯಕ್ರಮ



## Yakshagana prasanga written in Arebhashe language ready

MANGALURU, DHNS

A Yakshagana prasanga (episode) written in Arebhashe, a dialect spoken mainly by Gowda and other communities in parts of Dakshina Kannada and Kodagu districts, has been successfully adapted for Talamaddale.

Following an appeal from Karnataka Arebhashe Samskriti Mathu Sahithya Academy, Bhagavatha Bhavyasri Kulkunda had come out with Yakshagana Prasanga in Arebhashe language.

Though Yakshagana and Talamaddale were performed in Arebhashe language in the past, the prasanga was mainly in Kannada.

To ensure that even prasanga is available in Arebhashe, Bhavyasri is now translating five Kannada prasangas to Arebhashe.

Already, the prasanga of 'Sharasethu Bandhana' in the name of 'Baanada Paala' has been translated. The audio and video of these two prasan- gas have also been completed.



Talamaddale on the prasanga 'Baanada Paala'.

Karnataka Arebhashe Samskriti Mathu Sahithya Academy President Lakshminarayana Kajegadde said, "When we discussed on Yakshagana Prasanga in Arebhashe, we faced the question of who has to write. Those who are well-versed in Arebhashe ... rhythmic structure of Yakshagana. Those who have knowledge of the rhythmic structure have faced the language constraint. Hence, the academy decided to appeal to Bhagavatha Bhavyasri to translate the Yakshagana prasanga."

Bhavyasri said, "My guru Vishwa Vinod Banari has sup- ... in writing the prasanga in Arebhashe language. Guru Ganesh Kolekadi has guided me on the rhythmic structure. Further, Bhagavatha Subraya Sampaje too has guided me on the language. Academy President Lakshminarayana Kajegadde and Jabbar Samo too have supported me."

"It was a challenging work to write the prasanga in Arebhashe language. I started to work on it during the lockdown. I am happy that the academy has given priority to new experiments in language," adds Bhavyasri.

Yakshagana Bhagavatha Subraya Sampaje said, "I had suggested to the academy that Bhavyasri is capable of writing prasanga in Arebhashe language. The effort by Bhavyasri will be a big contribution to the language."

Talamaddale recording of prasanga 'Banada Paala' has been completed.

Artistes Bhavyasri Kulkunda in Bhagavathike, Murari Kadambalithaya in Chende, Akshay Rao Vitla in Maddale, Kolthige Narayana Gowda, Jabbar Samo Sampaje and Jayanand Sampaje as Arthadhari had taken part in the Talamaddale.

The recorded Talamaddale in Arebhashe will be uploaded by the academy on the YouTube channel shortly, informed Kajegadde.

Mangaluru

**'ವಿಕಸನ' ಟಿ.ವಿ. ಸ್ಟುಡಿಯೋ, ಪುತ್ತೂರು.**
**https://youtu.be/1pOLEvdAQhQ**

# ಅರೆಭಾಷೆ ಶಬ್ದಕೋಶ ರಚನಾ ಕಮ್ಮಟ







ಕರ್ನಾಟಕ ಸರಕಾರ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ವತಿಂದ

**ಅರೆಭಾಷೆ ನಿಘಂಟು ಪೂರ್ವಭಾವಿ ಸಭೆ**
**ಸ್ವರೂಪ, ರಚನೆ ಮತ್ತೆ ಕ್ಷೇತ್ರಾಧ್ಯಯನ**

(ಸುಳ್ಯ ಪ್ರದೇಸದ ಅರೆಬಾಸೆ ಹಿರಿಯ ಹಾಗೂ ಭಾಷಾಭಿಮಾನಿಗಳ ಸಮ್ಮುಕಲಿ ಅರೆಬಾಸೆ ಸಬ್ದ ನಿಸ್ಪತ್ತಿ ಸಾಸ್ತ್ರದ ಪ್ರಕಾರ ನಿಘಂಟ್ ರಚನೆ ಮಾಡುವ ಯೋಜನೆ ಪೂರ್ವಭಾವಿ ಸಬೆ)

ದಿನ : ೨೭.೦೯.೨೦೨೦ರಂದ್ ಐತಾರ ಬೆಳಿಗ್ಗೆ ೧೦ ಗಂಟೆಂದ ೨.೩೦ರ ವರೆಗೆ
ಜಾಗೆ : ಯುವಜನ ಸಂಯುಕ್ತ ಮಂಡಳಿ ಸಭಾಂಗಣ, ಸುಳ್ಯ

**ಸಂಪನ್ಮೂಲ ವ್ಯಕ್ತಿ**

ಪ್ರೊ. ಜೆ. ರಾಮಸ್ವಾಮಿ ವಿಶ್ರಾಂತ ಪ್ರಾಧ್ಯಾಪಕರ್, ಮೈಸೂರು
ಡಾ. ಪದ್ಮನಾಭ ಕೇಕುಣ್ಣಾಯ ತುಳು ನಿಘಂಟು ತಜ್ಞರು, ಉಡುಪಿ

**ಭಾಗವಹಿಸುವ ಸದಸ್ಯರ್**

ಎ.ಟಿ.ಕುಸುಮಾಧರ, ಜಯಪ್ರಕಾಶ್ ಮೋಂಟಡ್ಕ, ಪುರುಷೋತ್ತಮ ಕಿರ್ಲಾಯ
ಡಾ. ಪುರುಷೋತ್ತಮ ಕೆ. ಕರಂಗಲ್ಲು, ಕಿರಣ್ ಕುಂಬಳ್ಚೇರಿ, ಭರತೇಶ ಅಲಸಂಡೆಮಜಲು

| ಡಾ. ವಿಶ್ವನಾಥ ಬದಿಕಾನ | ಚಿನ್ನಸ್ವಾಮಿ | ಲಕ್ಷ್ಮೀನಾರಾಯಣ ಕಜೆಗದ್ದೆ |
|---|---|---|
| ಸದಸ್ಯ ಸಂಚಾಲಕರ್ | ರಿಜಿಸ್ಟ್ರಾರ್ | ಅಧ್ಯಕ್ಷರ್ |

## ಸೆ.27: ಅರೆಭಾಷೆ ಶಬ್ದ ನಿಷ್ಪತ್ತಿ ಅರ್ಥಕೋಶ ರಚನೆಗೆ ಸುಳ್ಯದಲ್ಲಿ ಸಭೆ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಯಿಂದ ಅರೆಭಾಷೆಯಲ್ಲಿ ಶಬ್ದ ನಿಷ್ಪತ್ತಿ ಶಾಸ್ತ್ರದ ಪ್ರಕಾರ ಅರ್ಥ ಕೋಶ ರಚನೆ ಮಾಡುವ ಯೋಜನೆಯಡಿ ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆಯವರ ಅಧ್ಯಕ್ಷತೆಯಲ್ಲಿ ಪೂರ್ವಭಾವಿ ಸಭೆಯು ಸೆ.27ರಂದು ಸುಳ್ಯದ ಯುವಜನ ಸಂಯುಕ್ತ ಮಂಡಳಿ ಸಭಾಭವನದಲ್ಲಿ ನಡೆಯಲಿದ್ದು, ಸಭೆಗೆ ಭಾಷಾಭಿಮಾನಿಗಳು ಆಗಮಿಸಿ ಸೂಕ್ತ ಸಲಹೆ ಸೂಚನೆ ನೀಡುವಂತೆ ಅಕಾಡೆಮಿ ರಿಜಿಸ್ಟ್ರಾರ್ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

**ಯುವಜನ ಸಂಯುಕ್ತ ಮಂಡಳಿ, ಸಭಾಂಗಣ ಸುಳ್ಯ**



## ಅರೆಭಾಷೆ ಅರ್ಥಕೋಶ ರಚನೆಯ ಪೂರ್ವಭಾವಿ ಸಭೆ

ಮಡಿಕೇರಿ, ಅ. 13: ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಯಿಂದ, ಕೊಡಗು ಪ್ರದೇಶ ವ್ಯಾಪ್ತಿಯ ಅರೆಭಾಷಿಕ ಹಿರಿಯರು ಹಾಗೂ ಭಾಷಾಭಿಮಾನಿಗಳ ಸಮ್ಮುಖದಲ್ಲಿ

ಅರೆಭಾಷೆ ಶಬ್ಧ ನಿಷ್ಪತ್ತಿ ಶಾಸ್ತ್ರದ ಪ್ರಕಾರ ಅರ್ಥಕೋಶ ರಚನೆ ಮಾಡುವ ಯೋಜನೆಯ ಪೂರ್ವಭಾವಿ ಸಭೆ ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ ಅವರ ಅಧ್ಯಕ್ಷತೆಯಲ್ಲಿ ಮಡಿಕೇರಿಯ ಹುತಾತ್ಮ ಗುಡ್ಡೆಮನೆ ಅಪ್ಪಯ್ಯಗೌಡ ರಸ್ತೆಯಲ್ಲಿರುವ ಕೊಡಗು ಗೌಡ ಮಹಿಳಾ ಒಕ್ಕೂಟದ ಸಭಾಂಗಣದಲ್ಲಿ ನಡೆಯಿತು.

ಈ ಸಂದರ್ಭ ಹಿರಿಯ ಭಾಷಾ ತಜ್ಞ ಜೆ. ರಾಮಸ್ವಾಮಿ ಈ ಯೋಜನೆಯ ಬಗ್ಗೆ ಸೂಕ್ತ ರೀತಿಯ ಮಾಹಿತಿಗಳನ್ನು, ಸಲಹೆ ಸೂಚನೆಗಳನ್ನು ಆನ್‌ಲೈನ್ ಮೂಲಕ ನೀಡಿದರು. ಡಾ. ಕರುಣಾಕರ ನಿಡಿಂಜಿ ಮಾತನಾಡಿ, ಪದಕೋಶಕ್ಕೆ ಪದ ಸಂಗ್ರಹಣೆಯ ಬಗ್ಗೆ ಮತ್ತು ಪದಕೋಶದ ಪ್ರಾಮುಖ್ಯತೆಯನ್ನು ವಿವರಿಸಿದರು.

ವೇದಿಕೆಯಲ್ಲಿ ಅಕಾಡೆಮಿ ಸದಸ್ಯ ಅರ್ಥಕೋಶ ರಚನಾ ಸಮಿತಿ ಸಂಚಾಲಕ ಡಾ. ವಿಶ್ವನಾಥ ಬದಿಕಾನ ಉಪಸ್ಥಿತರಿದ್ದರು. ಜಿಲ್ಲೆಯ ಹಿರಿಯರು, ವಿದ್ವಾಂಸರು, ಅಕಾಡೆಮಿ ಸದಸ್ಯರು ಭಾಗವಹಿಸಿದ್ದರು.

**ಮಹಿಳಾ ಒಕ್ಕೂಟ ಸಭಾಂಗಣ, ಮಡಿಕೇರಿ**

ತಾ. : 04–10–2020

# ವಿಚಾರ ಸಂಕಿರಣ

**ಗೋಷ್ಠಿ 1**

**ಡಾ ಬಿ ವಿ ವಸಂತಕುಮಾರ್, ಅಧ್ಯಕ್ಷರು, ಕರ್ನಾಟಕ ಅರೆಭಾಷೆ ಸಾಹಿತ್ಯ ಅಕಾಡೆಮಿ**
**ಭಾಷಾ ಅಕಾಡೆಮಿಯ ಚಟುವಟಿಕೆಗಳ ಸ್ವರೂಪ ಮತ್ತೆ ಸಾಧ್ಯತೆಗಳು**






ಕರ್ನಾಟಕ ಸರ್ಕಾರ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ವತಿಂದ

**ವಿಚಾರ ಸಂಕಿರಣ**

ದಿನ : **04-10-2020** ಐತ್ವಾರ ಬೊಳ್ಪಿಗೆ ಗಂಟೆ 10:30
ಜಾಗೆ : 'ಸಹಕಾರ ಭವನ' ಪಯಸ್ವಿನಿ ಪ್ರಾ.ಕೃ.ಪ.ಸ. ಸಂಘ ನಿ. ಸಂಪಾಜೆ ,ಉ. ಕೊಡಗು

ಸಭಾಧ್ಯಕ್ಷರ್ : ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ ಅಧ್ಯಕ್ಷರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಉದ್ಘಾಟಕರ್ : ಶ್ರೀ ಯನ್. ಯಸ್. ದೇವಿಪ್ರಸಾದ್, ಮಾಜಿ ಅಧ್ಯಕ್ಷರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮುಖ್ಯ ನೆಂಟ್ರ್ : ಶ್ರೀ ಯನ್. ಸಿ. ಅನಂತ, ಅಧ್ಯಕ್ಷರ್, ಪಯಸ್ವಿನಿ ಪಾ. ಕೃ. ಪ. ಸ. ಸಂಘ (ನಿ.) ಸಂಪಾಜೆ ಕೊಡಗು
ಗೋಷ್ಠಿ 1 : ಡಾ। ಬಿ. ವಿ. ವಸಂತಕುಮಾರ್ ಅಧ್ಯಕ್ಷರ್, ಕರ್ನಾಟಕ ಸಾಹಿತ್ಯ ಅಕಾಡೆಮಿ
ವಿಷಯ : ಭಾಷಾ ಅಕಾಡೆಮಿಯ ಚಟುವಟಿಕೆಗಳ ಸ್ವರೂಪ ಮತ್ತೆ ಸಾಧ್ಯತೆಗ
ಗೋಷ್ಠಿ 2 : ಶ್ರೀ ನಾಗೇಶ್ ಕುಂದಲ್ಪಾಡಿ ಅಧ್ಯಕ್ಷರ್, ಪೆರಾಜೆ ಪ್ರಾ. ಕೃ. ಪ. ಸ. ಸಂಘ (ನಿ.) ಪೆರಾಜೆ
ವಿಷಯ : ಭಾಷೆ ಮತ್ತೆ ಸಂಸ್ಕೃತಿ ಉಳ್ಸುವಲ್ಲಿ ಸಮುದಾಯದ ಪಾತ್ರ

ಸ್ವಾಗತ ಬಯಸುವೊವು

ಶ್ರೀ ಪುರುಷೋತ್ತಮ ಕಿರ್ಲಾಯ, ಶ್ರೀ ಕುಸುಮಾಧರ ಎ. ಟಿ. ಸದಸ್ಯಸಂಚಾಲಕರ್
ಚಿನ್ನಸ್ವಾಮಿ ರಿಜಿಸ್ಟ್ರಾರ್
ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ ಅಧ್ಯಕ್ಷರ್




Kannada Sahitya Academy Chairman Dr B V Vasant Kumar speaks during a seminar organised by Arebhashe Literary and Cultural Academy in Sampaje on Sunday. DH PHOTO

## Only love, pride can save a language: KSA chief

NAPOKLU, DHNS: Language is the key to the thought process of a person. A language can be saved only if the user has love towards it and also feels proud about it, said Kannada Sahitya Academy Chairman Dr B V Vasanth Kumar.

He was speaking during a seminar on Arebhashe language, organised by Karnataka Arebhashe Literary and Cultural Academy, at Payaswini Agricultural Credit Co-operative Society in Sampaje on Sunday.

"There have to be good dictionaries and encyclopedias for any language to thrive. Or else, the language may lose its existence. Documentation of the works in the languages is also equally important to preserve the indigenous culture. Academies should work towards the aspirations of communities," he meanwhile said.

Primary Agriculture Credit Cooperative Society president Nagesh Kundalpadi said that many aspects of local culture were lost with the vanishing of agriculture.

"With the help of academies, the language of a community is being developed as the language of a region. This will further introduce the culture and tradition of the community to the entire world. There is a need to involve more youth in the resourceful programmes organised by the academy. Good quality works need to be published," he said.

Arebhashe Literary and Cultural Academy former chairman N S Deviprasad inaugurated the programme. Academy Chairman Lakshminarayana Kajegadde presided.

Payaswini Agricultural Credit Cooperative Society President N C Ananth was present.

**ಗೋಷ್ಠಿ 2**

**ಶ್ರೀ ನಾಗೇಶ್ ಕುಂದಲ್ಪಾಡಿ ಅಧ್ಯಕ್ಷರು, ಪೆರಾಜೆ ಪ್ರಾ.ಕೃ.ಪ.ಸ. ಸಂಘ (ನಿ.) ಪೆರಾಜೆ**
**ಭಾಷೆ ಮತ್ತು ಸಂಸ್ಕೃತಿ ಉಳಿಸುವಲ್ಲಿ ಸಮುದಾಯದ ಪಾತ್ರ.**

**ಸಹಕಾರ ಭವನಪಯಸ್ವಿನಿ ಪ್ರಾ.ಕೃ.ಪ.ಸ. ಸಂಘ ನಿ. ಸಂಪಾಜೆ, ಉ. ಕೊಡಗು**

ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ.ವಸಂತ ಕುಮಾರ್ ಅಭಿಮತ

## ದಾಖಲೀಕರಣದಿಂದ ಅರೆಭಾಷೆ ಉಳಿಸಲು ಸಾಧ್ಯ

ವಿಜಯವಾಣಿ ಸುದ್ದಿಜಾಲ ಮಡಿಕೇರಿ
...ಶ್ವಕೋಶ, ನಿಘಂಟು, ಸಾಹಿತ್ಯ ದಾಖಲೀಕರಣ...ಂದ ಅರೆಭಾಷೆ ಉಳಿಸಲು ಸಾಧ್ಯ ಎಂದು ಕರ್ನಾ...ಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ.ಬಿ.ವಿ. ...ಸಂತಕುಮಾರ್ ಅಭಿಪ್ರಾಯಪಟ್ಟರು.

ಕರ್ನಾಟಕ ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿ ...ಕಾಡೆಮಿ ವತಿಯಿಂದ ಸಂಪಾಜೆಯ ಪಯಸ್ವಿನಿ ...ಪ.ಸ. ಸಂಘದ ಸಹಕಾರ ಭವನದಲ್ಲಿ ...ೋಮವಾರ ಆಯೋಜಿಸಿದ್ದ 'ಅರೆಭಾಷೆ ವಿಚಾರ ...ಂಕಿರಣ' ಕಾರ್ಯಕ್ರಮದಲ್ಲಿ ಭಾಷೆ ಅಕಾಡೆಮಿಯ ...ಟುವಟಿಕೆ ಮತ್ತು ಸ್ವರೂಪ ಮತ್ತು ಸಾಧ್ಯತೆಗಳ ...ರಿತು ಮಾತನಾಡಿದರು.

ಪ್ರತಿಯೊಬ್ಬರ ಆಲೋಚನೆ, ಆಸಕ್ತಿಗಳನ್ನು ...ಭಿವ್ಯಕ್ತಪಡಿಸಲು ಭಾಷೆ ಪ್ರಮುಖ ಪಾತ್ರ ವಹಿ...ಸಿದ್ದು, ಆ ನಿಟ್ಟಿನಲ್ಲಿ ಭಾಷೆಯ ಮೇಲಿನ ಪ್ರೀತಿ ...ದ್ದಾಗ ಮಾತ್ರ ಒಂದು ಭಾಷೆ ಉಳಿಯಲು ಸಾಧ್ಯ...ವಾಗುತ್ತದೆ. ಹಾಗೆಯೇ ಶಬ್ದಕೋಶಗಳು ಇದ್ದಾಗ ...ಮಾತ್ರ ಭಾಷೆಯು ಅಸ್ತಿತ್ವದಲ್ಲಿರುತ್ತದೆ. ನಿಘಂಟು, ವಿಶ್ವಕೋಶಗಳೇ ಇಲ್ಲದ ಸಂದರ್ಭ ಭಾಷೆ ಅವನತಿಯ ಹಾದಿಯನ್ನು ಹಿಡಿಯುತ್ತದೆ ಎಂದರು.

ಭಾಷೆಯುಸಂಸ್ಕೃತಿ,ಪ್ರಕೃತಿಯನ್ನೊಳಗೊಂಡು ಸಮರ್ಥ ದಾಖಲೀಕರಣವಾದರೆ ಒಂದು ಜನಾಂಗ, ಪ್ರಾದೇಶಿಕತೆ, ಬಹುತ್ವ ಉಳಿಯುತ್ತದೆ. ವ್ಯಕ್ತಿಗಳ ನಿರ್ಮಾಣ ಮಾಡುವ, ಮನುಷ್ಯನಲ್ಲಿರುವ ಅಸಮಾನತೆ, ಕಣ್ಣೀರನ್ನು ಒರೆಸುವ ಕೆಲಸವನ್ನು ಅಕಾಡೆಮಿ ಮಾಡಬೇಕಾಗುತ್ತದೆ ಎಂದರು.



ಕರ್ನಾಟಕ ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿಯಿಂದ ಸಂಪಾಜೆಯ ಸಹಕಾರ ಭವನದಲ್ಲಿ ಆಯೋಜಿಸಿದ್ದ ಅರೆಭಾಷೆ 'ವಿಚಾರ ಸಂಕಿರಣ' ವನ್ನು ಎನ್.ಎಸ್.ದೇವಿ ಪ್ರಸಾದ್ ಉದ್ಘಾಟಿಸಿದರು. ಡಾ.ಬಿ.ವಿ.ವಸಂತ ಕುಮಾರ್, ಎನ್.ಸಿ.ಅನಂತ, ಜಾನಕಿ ಬೆಳ್ಯಪ್ಪ ಇತರರಿದ್ದರು.

ಯುವಜನರನ್ನು ಬೆಳೆಸಿ: ಭಾಷೆ ಮತ್ತು ಸಂಸ್ಕೃತಿ ಉಳಿಸುವಲ್ಲಿ ಸಮುದಾಯದ ಪಾತ್ರ ಕುರಿತು ಮಾತನಾಡಿದ ಪೆರಾಜೆ ಪ್ರಾ.ಕೃ.ಪ.ಸ.ಸಂಘದ ಅಧ್ಯಕ್ಷ ಹಾಗೂ ಮಡಿಕೇರಿ ತಾ.ಪಂ.ಸದಸ್ಯ ನಾಗೇಶ್ ಕುಂದಲ್ಪಾಡಿ, ಪ್ರಸ್ತುತ ಸಂದರ್ಭ ಭತ್ತದ ಬೇಸಾಯ ಪದ್ಧತಿಗಳು ನಶಿಸಿಹೋದಂತೆ ಅನೇಕ ಆರಾಧನೆ, ಆಚರಣೆಗಳೂ ನಶಿಸಿ ಹೋಗಿವೆ. ಅಕಾಡೆಮಿಯು ಕಮ್ಮಟಗಳನ್ನು ನಡೆಸಿ ಯುವಜನರನ್ನು ಭಾಷಿಕ ಸಾಂಸ್ಕೃತಿಕ ಹಾಗೂ ಬೌದ್ಧಿಕ ನೆಲೆಯಲ್ಲಿ ಬೆಳೆಸುವ ಕೆಲಸ ವಾಗಬೇಕಿದೆ ಎಂದು ಸಲಹೆ ಮಾಡಿದರು.

ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮಾಜಿ ಅಧ್ಯಕ್ಷ ಎನ್.ಎಸ್.ದೇವಿಪ್ರಸಾದ್ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಅಕಾಡೆಮಿಯ ಅಧ್ಯಕ್ಷ ಲಕ್ಷೀನಾರಾಯಣ ಕಜೆಗದ್ದೆ ಪ್ರಾಸ್ತಾವಿಕವಾಗಿ ಮಾತನಾಡಿದರು. ಅಕಾಡೆಮಿಯ ಸದಸ್ಯೆ ಬೈತಡ್ಕ ಜಾನಕಿ ಬೆಳ್ಯಪ್ಪ, ಧನಂಜಯ ಅಗೋಳಿಕಜೆ ಸೇರಿ ಅರೆಭಾಷಾ ಅಭಿಮಾನಿಗಳು, ಭಾಷಾ ವಿದ್ವಾಂಸರು ಉಪಸ್ಥಿತರಿದ್ದರು.

# ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನಪು

**26-10-2020**

## ಉಪನ್ಯಾಸ ಮಾಲೆ-1

### ಡಾ ಮಾಧವ ಪೆರಾಜೆ

ಪ್ರಾಧ್ಯಾಪಕರು, ದ್ರಾವಿಡ ಸಂಸ್ಕೃತಿ ಅಧ್ಯಾಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿಷಯ

**ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟದ ಹಿನ್ನಲೆ**




https://youtu.be/Amp1GmtGHTU

**ತಾ. : 27-10-2020**

## ಉಪನ್ಯಾಸ ಮಾಲೆ-2

### ಡಾ ಪ್ರಭಾಕರ ಶಿಶಿಲ

ವಿಶ್ರಾಂತ ಪ್ರಾಂಶುಪಾಲರು, ನೆಹರು ಸ್ಮಾರಕ ಪದವಿ ಕಾಲೇಜು,

ವಿಷಯ :

**ಕೆದಂಬಾಡಿ ರಾಮ ಗೌಡ ವ್ಯಕ್ತಿ ಚಿತ್ರಣ**




https://youtu.be/wLbNWbzA6C4

**ತಾ. : 28-10-2020**

## ಉಪನ್ಯಾಸ ಮಾಲೆ-3

### ಡಾ ಕುಶ್ವಂತ್ ಕೋಳಿಬೈಲು

ಮಕ್ಕಳ ತಜ್ಞರು, ಜಿಲ್ಲಾ ಆಸ್ಪತ್ರೆ ಮಡಿಕೇರಿ

ವಿಷಯ :

**ಗುಡ್ಡೆಮನೆ ಅಪ್ಪಯ್ಯ ಗೌಡ ವ್ಯಕ್ತಿ ಚಿತ್ರಣ**




https://youtu.be/JyUjFj0s-J0

**ತಾ. : 29-10-2020**

## ಉಪನ್ಯಾಸ ಮಾಲೆ-4

### ಅನಿಂದಿತ್ ಕೊಚ್ಚಿ

ವಿಷಯ

**ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟದ ನಂತರದ ದಿನಗಳು**




https://youtu.be/Wkj8cUoiTCk




**ಅಂತರ್ಜಾಲದಲ್ಲಿ ಉಪನ್ಯಾಸ ಮಾಲೆ**

ತಾ. : 30–10–2020

# ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನಪು ಮಾಡುವ ಕಾರ್ಯಕ್ರಮ.




ಸಂಪನ್ಮೂಲ ವ್ಯಕ್ತಿ :

ಡಾ. ವಿಶ್ವನಾಥ ಬದಿಕಾನ. ಎ.ಪಿ.ಎಂ.ಸಿ. ಸಭಾಭವನ, ಸುಳ್ಯ.

ವಿಷಯ : ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟ.

**ಎ. ಪಿ. ಎಂ. ಟಿ. ಸಭಾಭವನ, ಸುಳ್ಯ**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಸುಳ್ಯ ನಗರ ಅರೆಭಾಷಿಗರ ಸಮಿತಿನ ಕೂಡ್‌ಕಟ್ಟ್‌ಲಿ

**ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನ್ಪು ಮಾಡುವ ಜಂಬರ**

ದಿನ : 30-10-2020 ಹೊತ್ತು : ಹಿಂಬೊತ್ತು ಗಂಟೆ 4-00

ಜಾಗೆ : ಎ. ಪಿ. ಎಂ. ಸಿ. ಸಭಾಭವನ, ಸುಳ್ಯ

ಸಭಾಧ್ಯಕ್ಷರ್ : **ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ**
ಅಧ್ಯಕ್ಷರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಮುಖ್ಯ ನೆಂಟ್ರ್ : **ಶ್ರೀ ಎಸ್. ಅಂಗಾರ**
ಶಾಸಕರ್, ಸುಳ್ಯ ವಿಧಾನಸಭಾ ಕ್ಷೇತ್ರ

ವಿಶೇಷ ಆಹ್ವಾನಿತರ್ : **ಶ್ರೀ ವಿನಯ ಮುಳುಗಾಡು**
ಅಧ್ಯಕ್ಷರ್, ಎ. ಪಿ. ಎಂ. ಸಿ. ಸುಳ್ಯ
**ಶ್ರೀ ಧನಂಜಯ ಅಡ್ಪಂಗಾಯ**
ಅಧ್ಯಕ್ಷರ್, ದಕ್ಷಿಣ ಕನ್ನಡ ಗೌಡ ವಿದ್ಯಾಸಂಘ (ರಿ.), ಸುಳ್ಯ
**ಶ್ರೀ ಮೋಹನ್‌ರಾಂ ಸುಳ್ಳಿ**
ಅಧ್ಯಕ್ಷರ್, ಗೌಡರ ಯುವಸೇವಾ ಸಂಘ (ರಿ.) ಸುಳ್ಯ

ಮುಖ್ಯ ಮಾತ್‌ಗಾರರ್ : **ಡಾ। ವಿಶ್ವನಾಥ ಬದಿಕಾನ,** ಪ್ರಾಧ್ಯಾಪಕರ್, ಕನ್ನಡ ವಿಭಾಗ, ಸೈಂಟ್ ಅಲೋಷಿಯಸ್ ಕಾಲೇಜು ಮಂಗಳೂರು

ಎಲ್ಲವುಕೂ ಪ್ರೀತಿನ ಸ್ವಾಗತ ಬಯಸುವೊವು

**ಪುರುಷೋತ್ತಮ ಕಿರ್ಲಾಯ** **ಕುಸುಮಾಧರ ಎ.ಟಿ.** ಸದಸ್ಯಸಂಚಾಲಕರ್ | **ಚಿನ್ನಸ್ವಾಮಿ** ರಿಜಿಸ್ಟ್ರಾರ್ | **ಲಕ್ಷ್ಮೀನಾರಾಯಣ ಕಜೆಗದ್ದೆ** ಅಧ್ಯಕ್ಷರ್

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಸದಸ್ಯರ್ :**

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಶ್ರೀಮತಿ ಸ್ಮಿತಾ ಅಮೃತರಾಜ್, ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ, ಶ್ರೀ ಧನಂಜಯ ಅಗೋಳಿಕಜೆ, ಶ್ರೀ ದಂಬೆಕೋಡಿ ಯಸ್. ಆನಂದ, ಡಾ. ದಯಾನಂದ ಕೆ.ಸಿ., ಶ್ರೀ ಕುಸುಮಾಧರ ಎ.ಟಿ., ಡಾ.ವಿಶ್ವನಾಥ ಬದಿಕಾನ, ಶ್ರೀ ಜಯಪ್ರಕಾಶ್ ಎಂ.ಎಸ್., ಶ್ರೀ ಪುರುಷೋತ್ತಮ ಕಿರ್ಲಾಯ, ಡಾ. ಪುರುಷೋತ್ತಮ ಕೆ. ವಿ. ಕರಂಗಲ್ಲು, ಶ್ರೀ ಕಿರಣ್ ಕುಂಬಳಚೇರಿ, ಶ್ರೀ ಭರತೇಶ್ ಅಲಸಂಡೆಮಜಲು,

ಶ್ರೀ ರಂಜಿತ್ ಕುಕ್ಕೇಟಿ, ಶ್ರೀ ಅವಿನಾಶ್ ಡಿ.ಕೆ., ಶ್ರೀಮತಿ ಸವಿತಾ ಎಂ. ಕಲ್ಲಪಳ್ಳಿ
ಸಂಚಾಲಕರು ಮತ್ತು ಸದಸ್ಯರು ಸುಳ್ಯ ನಗರ ಅರೆಭಾಷಿಕರ ಸಮಿತಿ

## ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನಪು

**ಸುಳ್ಯ, ಅ. 30:** ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಸುಳ್ಯ ನಗರ ಅರೆಭಾಷಿಗರ ಸಮಿತಿಯ ಆಶ್ರಯದಲ್ಲಿ ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನಪು ಮಾಡುವ ಕಾರ್ಯಕ್ರಮ ಎಪಿಎಂಸಿ ಸಭಾಂಗಣದಲ್ಲಿ ನಡೆಯಿತು.


ಶಾಸಕ ಎಸ್. ಅಂಗಾರ ಅವರು ಮಾತನಾಡಿದರು.

ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ ಅಧ್ಯಕ್ಷತೆ ವಹಿಸಿದ್ದರು. ಶಾಸಕ ಎಸ್. ಅಂಗಾರ ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರಾದ ಕೆದಂಬಾಡಿ ರಾಮ ಗೌಡ, ಗುಡ್ಡೆಮನೆ ಅಪ್ಪಯ್ಯ ಗೌಡರ ಭಾವಚಿತ್ರಕ್ಕೆ ಪುಷ್ಪಾರ್ಚನೆ ಮಾಡಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಮುಖ್ಯ ಅತಿಥಿಗಳಾಗಿ ಸುಳ್ಯ ಎಪಿಎಂಸಿ ಅಧ್ಯಕ್ಷ ವಿನಯ ಮುಳುಗಾಡು, ಗೌಡರ ಯುವ ಸೇವಾ ಸಂಘದ ಅಧ್ಯಕ್ಷ ಮೋಹನ್ ರಾಮ ಸುಳ್ಳಿ ಭಾಗವಹಿಸಿದ್ದರು. ಮಂಗಳೂರು ಸ್ಟೆಂಟ್ ಅಲೋಶಿಯಸ್ ಕಾಲೇಜು ಕನ್ನಡ ವಿಭಾಗ ಪ್ರಾಧ್ಯಾಪಕ ಡಾ। ವಿಶ್ವನಾಥ ಬದಿಕಾನ ಅವರು ಮುಖ್ಯ ಭಾಷಣಕಾರರಾಗಿದ್ದರು.

ಅಕಾಡೆಮಿ ನಿರ್ದೇಶಕರಾದ ಪುರುಷೋತ್ತಮ ಕಿರ್ಲಾಯ ಹಾಗೂ ಕುಸುಮಾಧರ ಎ.ಟಿ. ಮನವಿ ಪತ್ರ ವಾಚಿಸಿದರು.

ನಗರ ಅರೆಭಾಷೆ ಸಮಿತಿಯ ಅವಿನಾಶ್ ಕುರುಂಜಿ ಅವರು ಸ್ವಾಗತಿಸಿದರು.

ತಾ. : 31–10–2020

# ಸ್ವಾತಂತ್ರ್ಯ ಹೋರಾಟಗಾರ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ

## ಹುತಾತ್ಮ ದಿನಾಚರಣೆ

ಗುಡ್ಡೆಮನೆ
ಅಪ್ಪಯ್ಯಗೌಡರ ಸ್ಮಾರಕ
ವೃತ್ತ, ಮಡಿಕೇರಿ





ಗುಡ್ಡೆಮನೆ ಅಪ್ಪಯ್ಯಗೌಡರ ಸಂಸ್ಮರಣೆ– ಕುಟುಂಬಸ್ಥರಿಂದ ನಮನ ಸಲ್ಲಿಕೆ

### ವೀರ ಸೇನಾನಿ ಪ್ರತಿಮೆಗೆ ಪುಷ್ಪನಮನ



ತಾ. : 28-11-2020ರಿಂದ 29-11-2020ರ ವರೆಗೆ

# ಅರೆಭಾಷೆ ಶಬ್ದಕೋಶ ತರಬೇತಿ ಕಾರ್ಯಾಗಾರ

ಸಂಪನ್ಮೂಲ ವ್ಯಕ್ತಿಗಳು :

ಪ್ರೊ. ಚೆ. ರಾಮಸ್ವಾಮಿ, ಡಾ. ಕರುಣಾಕರ ನಿಡಿಂಜಿ, ಡಾ. ವಿಶ್ವನಾಥ ಬದಿಕಾನ.






ಮಡಿಕೇರಿ: ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯಿಂದ ಕಾರ್ಯಾಗಾರ

## 'ಭಾಷೆ ಉಳಿದರೆ, ಸಂಸ್ಕೃತಿ ಉಳಿಯಲು ಸಾಧ್ಯ'

## Need to strengthen Arebhashe stressed

MADIKERI, DHNS

Culture can survive only with the language. Culture and language are interrelated. There is a need to save Arebhashe literature and culture, said writer Nagesh Kalooru.

He was speaking at a two-day training on Arebhashe dictionary organised by Karnataka Arebhashe Samskrithi Mathu Sahithya Academy at Kodagu Gowda Samaja Hall.

"All Indian languages are related to one another. There is a need to work towards strengthening Arebhashe language, culture and literature," he said.

Culture and language are like two faces of a coin. Language varies from place to place, he added.

The language also highlights the culture of the land. The Arebhashe spoken in Dakshina Kannada and Kodagu is unique. There is a need to develop a glossary in the language, said the writer.

Karnataka Arebhashe Samskrithi Mathu Sahithya Academy president Lakshmi Narayana Kajegadde said that the academy will bring out a dictionary in the language.

Academy member Dr Vishwanath Badikana also spoke on the occasion.

Writer Nagesh Kalooru speaks ata workshop on the dictionary in Arebhashe language in Madikeri.

ಕೊಡಗು ಗೌಡ ಸಮಾಜ, ಮಡಿಕೇರಿ

ತಾ. : 04-12-2020

# ಸಾಹೇಬ್ರು ಬಂದವೇ

## ನಾಟಕ ಪ್ರದರ್ಶನ

ನಿರ್ದೇಶನ: ಜೀವನ್‌ರಾಂ ಸುಳ್ಯ









ವಿಜಯ ಕರ್ನಾಟಕ

ಗುರುವಾರ, 03 ಡಿಸೆಂಬರ್ 2020

## ನಾಳೆ ಸಾಹೇಬ್ರು ಬಂದವೇ ಅರೆಭಾಷೆ ನಾಟಕ

### ಕೊರೊನಾ ಲಾಕ್‌ಡೌನ್ ಕಾರಣ ಮುಂದಕ್ಕೆ ಹೋಗಿದ್ದ ನಾಟಕ ಪ್ರದರ್ಶನಕ್ಕೆ ಕೊನೆಗೂ ಮುಹೂರ್ತ

■ ವಿಕ ಸುದ್ದಿಲೋಕ ಮಡಿಕೇರಿ

ಕನ್ನಡದ ಉಪಭಾಷೆಗಳಲ್ಲಿ ಒಂದಾಗಿರುವ ಅರೆಭಾಷೆಯ 'ಸಾಹೇಬ್ರು ಬಂದವೇ' ನಾಟಕ ಪ್ರದರ್ಶನಕ್ಕೆ ಕೊನೆಗೂ ಕಾಲ ಕೂಡಿ ಬಂದಿದೆ.

ಇದಕ್ಕಾಗಿ ಶುಕ್ರವಾರ (ಡಿ.4) ಮತ್ತು ಭಾನುವಾರ (ಡಿ.6)ಕ್ಕೆ ಸುಳ್ಯದ ರಂಗಮನೆಯಲ್ಲಿ ವೇದಿಕೆ ಸಿದ್ಧವಾಗಿದೆ.

15ಕ್ಕೂ ಹೆಚ್ಚು ಕಲಾವಿದರು

ಕಲಾವಿದರಾದ ಹಾರಂಬಿ ಯತೀನ್ ವೆಂಕಪ್ಪ, ವಿನೋದ್ ಮೂಡಗದ್ದೆ, ಪಟ್ಟಮಾಡ ರಾಜ್ ಮುಖೇಶ್, ದೀಪಕ್ ಮಜಿಕೋಡಿ, ಮಮತಾ ...

## ಅರೆಭಾಷೆ ನಾಟಕ ಸೀಮೋಲ್ಲಂಘನೆ

### 14ರಂದು 'ಸಾಹೇಬ್ರು ಬಂದವೆ' ರಂಗಕ್ಕೆ | ಗಡಿದಾಟಿ ಹೊರ ಜಿಲ್ಲೆಗಳಲ್ಲೂ ಪ್ರದರ್ಶನಕ್ಕೆ ಸಿದ್ಧತೆ

■ ಸುನಿಲ್ ಪೊನ್ನೇಟಿ ಮಡಿಕೇರಿ

ponsuni@gmail.com

ಕನ್ನಡದ ಉಪಭಾಷೆಗಳಲ್ಲಿ ಒಂದಾಗಿರುವ ಅರೆಭಾಷೆಯಲ್ಲಿ ನಾಟಕವೊಂದು ಸಿದ್ಧವಾಗುತ್ತಿದೆ. ಮಡಿಕೇರಿಯಲ್ಲಿ ಕೇಂದ್ರ ಸ್ಥಾನ ಹೊಂದಿರುವ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಆಶ್ರಯದಲ್ಲಿ ಸುಳ್ಯದ ರಂಗಮನೆಯಲ್ಲಿ ನಡೆದ 40 ದಿನಗಳ ರಂಗ ಶಿಬಿರದಲ್ಲಿ 'ಸಾಹೇಬ್ರು ...

ಅರೆಭಾಷೆ ಎಂಬುದೊಂದು ಇದೆ ಎನ್ನುವುದೇ ಬಹುತೇಕರಿಗೆ ಗೊತ್ತಿಲ್ಲ, ಹಾಗಾಗಿ ನಾಟಕದ ಮೂಲಕ ಭಾಷೆಯ ಪರಿಚಯ ಮಾಡುವ ಪ್ರಯೋಗಕ್ಕೆ ಮುಂದಾಗಿದೇವೆ. ...

ರಂಗಮನೆ, ಹಳೆಗೇಟು, ಸುಳ್ಯ

# ಅರೆಭಾಷೆ ದಿನಾಚರಣೆ

## ಯೂಟ್ಯೂಬ್, ಫೇಸ್‌ಬುಕ್ ಆನ್‌ಲೈನ್ ಸರಣಿ ಉಪನ್ಯಾಸ

**ತಾ. : 11-12-2020**

### ಸರಣಿ ಉಪನ್ಯಾಸ - 1

**ಪ್ರೊ. ಕೋಡಿ ಕುಶಾಲಪ್ಪ ಗೌಡ**
ಭಾಷಾ ವಿಜ್ಞಾನಿ ಮತ್ತೆ ವಿಶ್ರಾಂತ ಪ್ರಾಧ್ಯಾಪಕರು
ಮದ್ರಾಸ ವಿಶ್ವವಿದ್ಯಾಲಯ, ಚೆನ್ನೈ

ವಿಷಯ
**ಅರೆಭಾಷೆ - ಧ್ವನಿಮಾ ವ್ಯವಸ್ಥೆ**




https://youtu.be/356RiGvoTW0

**ತಾ. : 12-12-2020**

### ಸರಣಿ ಉಪನ್ಯಾಸ - 2

**ಪ್ರೊ ಪುರುಷೋತ್ತಮ ಬಿಳಿಮಲೆ**
ವಿಶ್ರಾಂತ ಪ್ರಾಧ್ಯಾಪಕರು
ಜೆ. ಎನ್. ಯು ವಿಶ್ವವಿದ್ಯಾನಿಲಯ, ದೆಹಲಿ

ವಿಷಯ
**ಅರೆಭಾಷೆ ಉಳ್ಸುವಸಾದ್ಯತೆಗ**




https://youtu.be/FJ3DkbcyKjM

**ತಾ. : 13-12-2020**

### ಸರಣಿ ಉಪನ್ಯಾಸ - 3

**ಡಾ ಕೋರನ ಸರಸ್ವತಿ**
ಕನ್ನಡ ಸಹ ಪ್ರಾಧ್ಯಾಪಕರ್
ಪ್ರಥಮ ದರ್ಜೆ ಮಹಿಳಾ ಕಾಲೇಜು, ಮಡಿಕೇರಿ

ವಿಷಯ:
**ಅರೆಭಾಷೆ ಸಂಸೋದನಾ ಸಾದ್ಯತೆಗ**




https://youtu.be/aWs9Cq2wHTY

**ತಾ. : 14-12-2020**

### ಸರಣಿ ಉಪನ್ಯಾಸ - 4

**ಡಾ. ಲಾವಣ್ಯ ಸಿ. ಪಿ. ಕೊಟ್ಟಕೇರಿಯಾನ**
ಕನ್ನಡ ಸಹಾಯಕ ಪ್ರಾಧ್ಯಾಪಕರು
ಶೇಷಾದ್ರಿಪುರಂ ಪದವಿ ಕಾಲೇಜು, ಮೈಸೂರು

ವಿಷಯ:
**ಅರೆಭಾಷೆನ ಬಳ್ಸುವನೆಲೆಗ ಮತ್ತೆ ಹಿನ್ನೆಲೆ**




https://youtu.be/jMXbD29A4yM



ಇಂದ್ 'ಅರೆಭಾಷೆ' ದಿನಗಡ
ಕರ್ನಾಟಕ ಅರೆಭಾಷಾ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಸಂಸ್ಥಾಪನಾ ದಿನ

ಅರೆಭಾಷೆ ಎಂದರೆ...




**ಯೂಟ್ಯೂಬ್,
ಫೇಸ್‌ಬುಕ್
ಆನ್‌ಲೈನ್ ಸರಣಿ
ಉಪನ್ಯಾಸ**

# ಅರೆಭಾಷೆ ದಿನಾಚರಣೆ

ತಾ. : 15-12-2020

## ಅರೆಭಾಷೆ ಯಕ್ಷಗಾನ"ಕಂಸವದೆ"ಪ್ರದರ್ಶನ




ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

**ಅರೆಭಾಷೆ ದಿನಾಚರಣೆ**

ಮತ್ತೆ

**ಅರೆಭಾಷೆ ಯಕ್ಷಗಾನ ಪ್ರದರ್ಶನ**

ದಿನ : 15-12-2020 ಮಂಗಳವಾರ ಹೊತ್ತು : ಹಿಂಬೊತ್ತು 6-00 ಗಂಟೆಗೆ
ಜಾಗೆ : ರೋಟರಿ ಹಿರಿಯ ಪ್ರಾಥಮಿಕ ಶಾಲಾ ವಠಾರ, ರಥಬೀದಿ ಸುಳ್ಯ

ಸಭಾಧ್ಯಕ್ಷರ್ : ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಅಧ್ಯಕ್ಷರ್,
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಉದ್ಘಾಟಕರ್ : ಶ್ರೀ ಮೋಹನ್ ರಾಂ ಸುಳ್ಳಿ
ಅಧ್ಯಕ್ಷರ್, ಗೌಡರ ಯುವ ಸೇವಾ ಸಂಘ (ರಿ.) ಸುಳ್ಯ

ಮುಖ್ಯ ಮಾತ್‌ಗಾರರ್ : ಶ್ರೀಮತಿ ಸ್ವರ್ಣ ಕಿಶೋರ್
ಅರ್ಥಶಾಸ್ತ್ರ ಉಪನ್ಯಾಸಕಿ,
ಶ್ರೀ ಶಾರದಾ ಮಹಿಳಾ ಪದವಿಪೂರ್ವ ಕಾಲೇಜು, ಸುಳ್ಯ

ನೆಂಟ್ರ್‌ಗ : ಶ್ರೀ ಜಿತೇಂದ್ರ ಎನ್. ಎ.
ಸಂಚಾಲಕರ್, ರೋಟರಿ ವಿದ್ಯಾಸಂಸ್ಥೆಗ, ಸುಳ್ಯ

ಪ್ರೀತಿಪೂರ್ವಕ ಸ್ವಾಗತ ಬಯಸುವೊವು

ಚಿನ್ನಸ್ವಾಮಿ
ರಿಜಿಸ್ಟ್ರಾರ್

ಲಕ್ಷ್ಮೀನಾರಾಯಣ ಕಜೆಗದ್ದೆ
ಅಧ್ಯಕ್ಷರ್

ಸದಸ್ಯರ್ :
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಶ್ರೀಮತಿ ಸ್ಮಿತಾ ಅಮೃತರಾಜ್, ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ, ಧನಂಜಯ ಅಗೋಳಿಕಜೆ, ದಂಬೆಕೋಡಿ ಯಸ್. ಆನಂದ, ಡಾ. ದಯಾನಂದ ಕೆ.ಸಿ., ಕುಸುಮಾಧರ ಎ.ಟಿ., ಡಾ. ವಿಶ್ವನಾಥ ಬದಿಕಾನ, ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ, ಪುರುಷೋತ್ತಮ ಕಿರ್ಲಾಯ, ಡಾ. ಪುರುಷೋತ್ತಮ ಕೆ. ವಿ. ಕರಂಗಲ್ಲು, ಕಿರಣ್ ಕುಂಬಳಚೇರಿ, ಭರತೇಶ್ ಅಲಸಂಡೆಮಜಲು,

ಸದಸ್ಯ ಸಂಯೋಜಕರ್ : ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ
ಕಿರಣ್ ಕುಂಬಳಚೇರಿ

**ಡಿ.15 ಅರೆಭಾಷೆ ದಿನಾಚರಣೆ, ಅರೆಭಾಷೆ ಯಕ್ಷಗಾನ ಪ್ರದರ್ಶನ**

### ಅರೆಭಾಷೆ ಅನ್ನದ ಭಾಷೆಯಾಗಬೇಕು: ಸ್ವರ್ಣಕಿಶೋರ್




ಮಕ್ಕಳಿಗೆ ಕಥೆ ಹೇಳುವ ಮೂಲಕ ಭಾಷಾ ವಿಸ್ತಾರತೆಯ ಕಾರ್ಯ ಪರಿಣಾಮಕಾರಿಯಾಗಬೇಕು. ಅರೆಭಾಷೆಯ ಮೇಲೆ ಭಾವನಾತ್ಮಕ ಅಭಿಮಾನ ಬೇಕು ಜೊತೆಗೆ ಅರೆಭಾಷೆಯು ಲಾಭ ತರುವ ಭಾಷೆಯೂ ಆಗಬೇಕು. ಈ ಭಾಷೆಯ ಕಲಾ ಚಟುವಟಿಕೆಗಳು ಹವ್ಯಾಸ ಮಾತ್ರವಾಗದೆ, ಕಲಾವಿದರ ಜೀವನೋಪಾಯ ಮಾರ್ಗವೂ ಆಗಬೇಕು. ಅರೆಭಾಷೆ ಅನ್ನದ ಭಾಷೆಯಾಗಬೇಕು ಎಂದು ಶ್ರೀ ಶಾರದಾ ಮಹಿಳಾ ಪ.ಪೂ. ಕಾಲೇಜಿನ ಅರ್ಥಶಾಸ್ತ್ರ ಉಪನ್ಯಾಸಕಿ ಸ್ವರ್ಣಕಿಶೋರ್ ಹೇಳಿದ್ದಾರೆ.

ಇವರು ಸುಳ್ಯ ರೋಟರಿ ಹಿರಿಯ ಪ್ರಾಥಮಿಕ ಶಾಲಾ ವಠಾರದಲ್ಲಿ ನಡೆದ ಅರೆಭಾಷೆ ದಿನಾಚರಣೆ ಮತ್ತು ಅರೆಭಾಷೆ ಯಕ್ಷಗಾನ ಪ್ರದರ್ಶನ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಸ್ಥಾಪನಾ ದಿನಾಚರಣೆ ಅಂಗವಾಗಿ ಉಪನ್ಯಾಸ ನೀಡಿದರು.

ಕಾರ್ಯಕ್ರಮವನ್ನು ರೋಟರಿ ವಿದ್ಯಾಸಂಸ್ಥೆಯ ಸಂಚಾಲಕ ಎನ್.ಎ. ಜಿತೇಂದ್ರ ಉದ್ಘಾಟಿಸಿ ಮಾತನಾಡಿದ ಅವರು, ಭಾಷೆಯ ಮೇಲಿನ ಪ್ರಾಮಾಣಿಕ ಪ್ರೀತಿಯಿಂದ ಭಾಷೆಯನ್ನು ಬೆಳೆಸಬೇಕು. ಉಳಿದ ಭಾಷೆಯ ಒಳ್ಳೆಯ ಅಂಶಗಳನ್ನು ಸೇರಿಸಿ ಭಾಷೆ ಬೆಳೆಸಬೇಕು ಎಂದು ಅವರು ಹೇಳಿದರು.

ಕಾರ್ಯಕ್ರಮದ ಸಭಾಧ್ಯಕ್ಷತೆಯನ್ನು ವಹಿಸಿದ್ದ ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ ಮಾತನಾಡಿ, ಅರೆಭಾಷೆಗೆ ಅಕಾಡೆಮಿ ಒಂದು ಇಂತಹ ಚಟುವಟಿಕೆ ಮಾಡುತ್ತಾ ಹೋದರೆ ಇಂತಹದ್ದೆ ಬೇರೆ ಬೇರೆ ಭಾಷೆ ಮಾತನಾಡುವ ಸಂಸ್ಕೃತಿ ಸಮುದಾಯದವರಿದ್ದಾರೆ. ಅವರಲ್ಲಿಯೂ ಒಳ್ಳೆಯ ಕಾದಂಬರಿಗಾರರು ಲೇಖಕರು ಇದ್ದಾರೆ.

ಅರಭಾಷೆ ಅಕಾಡೆಮಿ ಇಂತಹ ಚಟುವಟಿಕೆ ಮಾಡುತ್ತಾ ಹೋದರೆ ಒದು ಒಂದು ಮಾದರಿಯಾಗುತ್ತದೆ. ಅರಭಾಷೆಗೆ ಅಕಾಡೆಮಿ ಕೊಟ್ಟ ನಂತರ ಸಾಕಷ್ಟು ಅಭಿವೃದ್ಧಿ ಹೊಂದಿದೆ. ಇಂತಹ ಸಮುದಾಯದವರಿಗೂ ಪ್ರಸ್ತಾವನೆ ಸಲ್ಲಿಸಲು ಅಕಾಡೆಮಿ ಅನುಕೂಲವಾಗುತ್ತದೆ.

ಮುಂದಿನ ವರ್ಷ ದಶಮಾನೋತ್ಸವ ಆಚರಿಸುವವರಿದ್ದೇವೆ. ಈ ಸಂದರ್ಭದಲ್ಲಿ ಎಲ್ಲರೂ ಗೌಜಿ ಗದ್ದಲ ಏನೂ ಇರುವುದಿಲ್ಲ. ನಮ್ಮ ಅಕಾಡಮಿ ನಾವು ಬೌದ್ಧಿಕ ಚಟುವಟಿಕೆಗಳಿಗೆ ಆದ್ಯತೆ ಕೊಡುವ ನಿರ್ಧಾರ ಮಾಡಿದ್ದೇವೆ. ಅದಕ್ಕೆ ಪೂರಕವಾಗಿ ನಾವು ಸಾಕಷ್ಟು ಚಟುವಟಿಕೆಗಳಿಗೆ ತಯಾರಾಗಿದ್ದೇವೆ. ಕೊರೋನಾದ ಮಧ್ಯೆಯೂ ನಾವು ರಂಗಭೂಮಿ ಚಟುವಟಿಕೆಗಳನ್ನು ಮಾಡಿದ್ದೇವೆ. ಕೊರೋನಾ ಬೌದ್ಧಿಕ ಚಟುವಕೆಗಳಿಗೆ ಅಡ್ಡಿ ಆಗಲ್ಲ ಎಂದು ಹೇಳಿದರು.

ಕಾರ್ಯಕ್ರಮದ ಸದಸ್ಯ ಸಂಚಾಲಕರುಗಳಾದ ಕಿರಣ್ ಕುಂಬಳಚೇರಿ ಸ್ವಾಗತಿಸಿ ಜಯಪ್ರಕಾಶ್ ಮೋಂಟಡ್ಕ ವಂದಿಸಿದರು. ಶಿಕ್ಷಕಿ ವಾಣಿ ಧನೇಶ್ ಕಾರ್ಯಕ್ರಮ ನಿರೂಪಿಸಿದರು. ಸಭಾ ಕಾರ್ಯಕ್ರಮದ ಬಳಿಕ ಅರೆಭಾಷೆ ಯಕ್ಷಗಾನ ಕಂಸ ವಧೆ ಪ್ರದರ್ಶನಗೊಂಡಿತು.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಅರೆಭಾಷೆ ದಿನಾಚರಣೆ ಬಗ್ಗೆ
ಅರೆಭಾಷೆ ಯಕ್ಷಗಾನ ಪ್ರದರ್ಶನ

**ಕಂಸ ವಧೆ**

ದಿನ : 15-12-2020 ಮಂಗಳವಾರ
ಜಾಗೆ : ರೋಟರಿ ಹಿರಿಯ ಪ್ರಾಥಮಿಕ ಶಾಲಾ ವಠಾರ ರಥಬೀದಿ, ಸುಳ್ಯ

ಹಿಮ್ಮೇಳ
ಭಾಗವತರು : ಶ್ರೀಮತಿ ಭವ್ಯಶ್ರೀ ಕುಲ್ಕುಂದ
ಚೆಂಡೆ : ಶ್ರೀ ಚಂದ್ರಶೇಖರ ಗುರುವಾಯನಕೆರೆ
ಮದ್ದಲೆ : ಶ್ರೀ ಅಕ್ಷಯ ರಾವ್ ವಿಟ್ಲ
ಚಕ್ರತಾಳ : ಶ್ರೀ ಮುರಾರಿ ಭಟ್ ಪಂಜಿಗದ್ದೆ

ಮುಮ್ಮೇಳ
ಕಂಸ : ಶ್ರೀ ಕೊಳ್ತಿಗೆ ನಾರಾಯಣ ಗೌಡ
ಅಕ್ರೂರ : ಶ್ರೀ ಜಬ್ಬಾರ್ ಸಮೊ ಸಂಪಾಜೆ
ಕೃಷ್ಣ : ಶ್ರೀ ಜಯಾನಂದ ಸಂಪಾಜೆ
ಬಲರಾಮ : ಶ್ರೀ ರವಿಚಂದ್ರ ಚೆಂಬು
ಚಾಣೂರ : ಶ್ರೀ ಶೇಖರ ಮಣಿಯಾಣಿ

**ಸುಳ್ಯ**

## ಅರೆಭಾಷೆ ಯಕ್ಷಗಾನ ತಾಳಮದ್ದಲೆ "ಪಂಚವಟಿ"ಪ್ರದರ್ಶನ




https://youtu.be/9UsuzfyclOA

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

**ಅರೆಭಾಷೆ ದಿನಾಚರಣೆ**

ಮತ್ತೆ

**ಅರೆಭಾಷೆ ಯಕ್ಷಗಾನ ತಾಳಮದ್ದಲೆ ಕೂಟ**

ದಿನ : 15-12-2020 ಮಂಗಳವಾರ ಹೊತ್ತು : ಹೊತ್ತಾರೆ 10-00 ಗಂಟೆಗೆ
ಜಾಗೆ : ಭಾರತೀಯ ವಿದ್ಯಾಭವನ ಮಡಿಕೇರಿ

ಸಭಾಧ್ಯಕ್ಷರ್ : ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಅಧ್ಯಕ್ಷರ್,
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಉದ್ಘಾಟಕರ್ : ಶ್ರೀ ಬಾರಿಯಂಡ ಜೋಯಪ್ಪ
ವಿಶ್ರಾಂತ ಪ್ರಾಂಶುಪಾಲರ್,

ನೆಂಟ್ರ್‌ಗ : ಶ್ರೀ ಸೂರ್ತಲೆ ಸೋಮಣ್ಣ
ಅಧ್ಯಕ್ಷರ್, ಕೊಡಗು ಗೌಡ ಸಮಾಜಗಳ ಒಕ್ಕೂಟ (ರಿ.) ಮಡಿಕೇರಿ
ಶ್ರೀಮತಿ ಕುಂಜಿಲನ ಮುತ್ತಮ್ಮ
ಅಧ್ಯಕ್ಷರ್, ಗೌಡ ಮಹಿಳಾ ಒಕ್ಕೂಟ (ರಿ.) ಮಡಿಕೇರಿ
ಶ್ರೀ ಪೈಕೇರ ಮನೋಹರ ಮಾದಪ್ಪ
ಅಧ್ಯಕ್ಷರ್, ಕೊಡಗು ಗೌಡ ಯುವ ವೇದಿಕೆ (ರಿ.)

ಪ್ರೀತಿಪೂರ್ವಕ ಸ್ವಾಗತ ಬಯಸುವೊವು

ಚಿನ್ನಸ್ವಾಮಿ
ರಿಜಿಸ್ಟ್ರಾರ್

ಲಕ್ಷ್ಮೀನಾರಾಯಣ ಕಜೆಗದ್ದೆ
ಅಧ್ಯಕ್ಷರ್

ಸದಸ್ಯರ್ :
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಶ್ರೀಮತಿ ಸ್ಮಿತಾ ಅಮೃತರಾಜ್, ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ, ಧನಂಜಯ ಅಗೋಳಿಕಜೆ, ದಂಬೆಕೋಡಿ ಯಸ್. ಆನಂದ, ಡಾ. ದಯಾನಂದ ಕೆ.ಸಿ., ಕುಸುಮಾಧರ ಎ.ಟಿ., ಡಾ. ವಿಶ್ವನಾಥ ಬದಿಕಾನ, ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ, ಪುರುಷೋತ್ತಮ ಕಿರ್ಲಾಯ, ಡಾ. ಪುರುಷೋತ್ತಮ ಕೆ. ವಿ. ಕರಂಗಲ್ಲು, ಕಿರಣ್ ಕುಂಬಳಚೇರಿ, ಭರತೇಶ್ ಅಲಸಂಡೆಮಜಲು,

ಸದಸ್ಯ ಸಂಯೋಜಕರ್ : ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ

ಮಡಿಕೇರಿ: ಅರೆಭಾಷೆ ದಿನಾಚರಣೆಯಲ್ಲಿ ವಿಶ್ರಾಂತ ಪ್ರಾಂಶುಪಾಲ ಬಾರಿಯಂಡ ಜೋಯಪ್ಪ ಕರೆ

### 'ಕೀಳರಿಮೆ ಬಿಡಿ; ಅರೆಭಾಷೆ ಉಳಿಸಿ'

ಪ್ರಜಾವಾಣಿ ವಾರ್ತೆ

ಮಡಿಕೇರಿ: 'ಸಣ್ಣ ಸಣ್ಣ ಸಮೂಹ ಭಾಷೆಗಳು ನಾಶವಾದರೆ ಸಂಸ್ಕೃತಿ ನಾಶವಾಗುತ್ತದೆ' ಎಂದು ವಿಶ್ರಾಂತ ಪ್ರಾಂಶುಪಾಲ ಬಾರಿಯಂಡ ಜೋಯಪ್ಪ ಎಚ್ಚರಿಸಿದರು.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಯಿಂದ ನಗರದ ಭಾರತೀಯ ವಿದ್ಯಾಭವನದಲ್ಲಿ ಮಂಗಳವಾರ ನಡೆದ 'ಅರೆಭಾಷೆ ದಿನಾಚರಣೆ ಮತ್ತು ಅರೆಭಾಷೆ ಯಕ್ಷಗಾನ ತಾಳಮದ್ದಳೆ ಕೂಟ' ಕಾರ್ಯಕ್ರಮಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

ಪ್ರತಿಯೊಬ್ಬರೂ ಅವರ ಮಾತೃ ಭಾಷೆಯಲ್ಲೇ ಮಾತನಾಡಬೇಕು. ಉನ್ನತ ಶಿಕ್ಷಣ ಪಡೆದು ಉದ್ಯೋಗ ಪಡೆದವರು ಮಾತೃ ಭಾಷೆಯಾದ ಅರೆಭಾಷೆಯನ್ನು ಉಳಿಸಬೇಕು ಎಂದು ನುಡಿದರು.

ಮಾತೃ ಭಾಷೆಯಲ್ಲಿ ಮಾತನಾಡಿದಾಗ ತಿರುಗಿ ನೋಡುವಂತಾಗುತ್ತದೆ. ಮಾತೃಭಾಷೆ ಬಗ್ಗೆ ಕೀಳರಿಮೆ ಬೇಡ. ಅರೆಭಾಷೆಯನ್ನು ಉಳಿಸಿ ಬೆಳೆಸಬೇಕು ಎಂದು ಸಲಹೆ ನೀಡಿದರು.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ ಮಾತನಾಡಿ, ಡಿ.11 ಅರೆಭಾಷೆ ಅಕಾಡೆಮಿ ಸ್ಥಾಪಿಸಿದ್ದ ದಿನವಾಗಿದ್ದು, ಆ ದಿಸೆಯಲ್ಲಿ ಅರೆಭಾಷೆ ದಿನಾಚರಣೆಯನ್ನು ಆಚರಿಸಲಾಗುತ್ತದೆ. ಅಕಾಡೆಮಿ ಸ್ಥಾಪನೆಗೆ ಹಲವರು ಶ್ರಮಿಸಿದ್ದಾರೆ ಎಂದರು.

ತುಳು ಭಾಷಯಂತೆಯೇ ಅರೆಭಾಷೆಯನ್ನು ಸಹ ಯಕ್ಷಗಾನ, ಕಥೆ, ನಾಟಕ ಕಾದಂಬರಿ, ಪ್ರಬಂಧ ಮೂಲಕ ಭಾಷೆಯನ್ನು ಎತ್ತರಕ್ಕೆ ಕೊಂಡೊಯ್ಯಬೇಕು. ಜೊತೆಗೆ ಐಎಸ್‌ಒ ಮಾನ್ಯತೆ ಪಡೆಯಲು ಶ್ರಮಿಸಬೇಕಿದೆ. ಆ ನಿಟ್ಟಿನಲ್ಲಿ ಸೃಜನಶೀಲ ಚಟುವಟಿಕೆ ಕೈಗೊಳ್ಳಬೇಕಿದೆ ಎಂದು ನುಡಿದರು.

> ಮಾತೃ ಭಾಷೆಯು ಆಕರ್ಷಣೀಯ ಗುಣ ಹೊಂದಿದೆ. ಅರೆಭಾಷೆಯ ಬಗ್ಗೆ ಅಭಿಮಾನ ಇರಬೇಕು. ಜೊತೆಗೆ ಮಾತನಾಡಲು ಹಿಂಜರಿಯಬಾರದು
> **ಬಾರಿಯಂಡ ಜೋಯಪ್ಪ** ವಿಶ್ರಾಂತ ಪ್ರಾಂಶುಪಾಲ

> ಅರೆಭಾಷೆಯಲ್ಲಿ ಯಕ್ಷಗಾನ ತಾಳಮದ್ದಳೆಗೆ ತುಂಬಾ ಅವಕಾಶವಿದೆ. ಅರೆಭಾಷೆ ಅಕಾಡೆಮಿ ದಶಮಾನೋತ್ಸವದಲ್ಲಿ ಹಲವು ಯೋಜನೆಗ ಹಮ್ಮಿಕೊಳ್ಳಲಾಗುವುದು
> **ಲಕ್ಷ್ಮೀನಾರಾಯಣ ಕಜೆಗದ್ದೆ,** ಅಧ್ಯಕ್ಷ, ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಕೊಡಗು ಗೌಡ ಸಮಾಜಗಳ ಒಕ್ಕೂಟದ ಅಧ್ಯಕ್ಷ ಸೂರ್ತಲೆ ಸೋಮಣ್ಣ ಮಾತನಾಡಿ, ಒಕ್ಕೂಟಗಳ ವತಿಯಿಂದ ಜಿಲ್ಲೆಯಾದ್ಯಂತ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು ಎಂದು ತಿಳಿಸಿದರು.

ಕೊಡಗು ಗೌಡ ಮಹಿಳಾ ಒಕ್ಕೂಟದ ನಿಕಟ ಪೂರ್ವ ಅಧ್ಯಕ್ಷೆ ರಾಧ ಯಾದವ ಮಾತನಾಡಿ, ಅರೆಭಾಷೆಯನ್ನು ಮಕ್ಕಳಿಗೆ ಕಲಿಸಬೇಕು. ತಾಳಮದ್ದಳೆ, ಯಕ್ಷಗಾನವನ್ನು ಮಕ್ಕಳಿಗೆ ಅಭ್ಯಾಸ ಮಾಡಿಸಬೇಕು ಎಂದು ಹೇಳಿದರು.

ಕೊಡಗು ಗೌಡ ಯುವ ವೇದಿಕೆಯ ಅಧ್ಯಕ್ಷ ಪೈಕೇರ ಮನೋಹರ ಮಾದಪ್ಪ ಮಾತನಾಡಿದರು. ಸದಸ್ಯರಾದ ಬೈತಡ್ಕ ಜಾನಕಿ ಬೆಳ್ಯಪ್ಪ, ಸ್ಮಿತಾ ಅಮೃತರಾಜ್, ಚೊಕ್ಕಾಡಿ ಪ್ರೇಮಾ ರಾಘವಯ್ಯ, ಧನಂಜಯ ಅಗೋಳಿಕಜೆ, ದಂಬೆಕೋಡಿ ಎಸ್.ಆನಂದ್, ಡಾ.ಕೆ.ಸಿ.ದಯಾನಂದ, ಎ.ಟಿ.ಕುಸುಮಾಧರ, ಪುರುಷೋತ್ತಮ ಕಿರ್ಲಾಯ ಹಾಜರಿದ್ದರು.

ರಿಜಿಸ್ಟ್ರಾರ್ ಚಿನ್ನಸ್ವಾಮಿ ಸ್ವಾಗತಿಸಿದರು. ಬೈತಡ್ಕ ಜಾನಕಿ ಪ್ರಾರ್ಥಿಸಿದರು. ಸದಸ್ಯರಾದ ಧನಂಜಯ ಅಗೋಳಿಕಜೆ ನಿರೂಪಿಸಿದರು. ಕೆ.ಸಿ. ದಯಾನಂದ ವಂದಿಸಿದರು.

ಅರೆಭಾಷೆ ದಿನಾಚರಣೆ ಪ್ರಯುಕ್ತ ಅರೆಭಾಷೆ ಯಕ್ಷಗಾನ ತಾಳಮದ್ದಳೆ 'ಪಂಚವಟಿ ಪ್ರಸಂಗ' ಗಮನ ಸೆಳೆಯಿತು. ಸುಬ್ರಾಯ ಸಂಪಾಜೆ, ಭವ್ಯಶ್ರೀ ಕುಲ್ಕುಂದ (ಭಾಗವತರು), ಚಂದ್ರಶೇಖರ ಗುರುವಾಯನಕೆರೆ (ಚೆಂಡೆ), ಅಕ್ಷಯ ರಾವ್ ವಿಟ್ಲ (ಮದ್ದಳೆ), ಮುರಾರಿ ಭಟ್ ಪಂಜಿಗದ್ದೆ (ಚಕ್ರತಾಳ) ಇವರು ಹಿಮ್ಮೇಳ ನಡೆಸಿಕೊಟ್ಟರು. ಜಯಾನಂದ ಸಂಪಾಜೆ (ಶ್ರೀರಾಮ), ಕೊಳ್ತಿಗೆ ನಾರಾಯಣ ಗೌಡ (ಲಕ್ಷ್ಮಣ), ರವಿಚಂದ್ರ ಚೆಂಬು (ಸೀತೆ), ಕುಸುಮಾಧರ ಎ.ಟಿ. (ಋಷಿಗ), ಜಬ್ಬಾರ್ ಸಮೊ ಸಂಪಾಜೆ (ಶೂರ್ಪನಖಿ) ಅವರು ಅರ್ಥಗಾರಿಕೆ ನುಡಿದರು.



ಮಡಿಕೇರಿಯಲ್ಲಿ ನಡೆದ ಅರೆಭಾಷೆ ದಿನಾಚರಣೆಗೆ ವಿಶ್ರಾಂತ ಪ್ರಾಂಶುಪಾಲ ಬಾರಿಯಂಡ ಜೋಯಪ್ಪ ಚಾಲನೆ ನೀಡಿದರು

**'ಅಳಿವಿನ ಅಂಚಿನಲ್ಲಿ 400 ಭಾಷೆಗಳು'**

ದೇಶದಲ್ಲಿ 780ಕ್ಕೂ ಹೆಚ್ಚು ಭಾಷೆಗಳಿದ್ದು, 400ರಷ್ಟು ಭಾಷೆಗಳು ಅಳಿವಿನ ಅಂಚಿನಲ್ಲಿವೆಯೆಂದು ಭಾಷಾ ಶಾಸ್ತ್ರಜ್ಞ ಗಣೇಶ್ ಎನ್.ದೇವಿ ಅವರು ಎಚ್ಚರಿಸಿದ್ದಾರೆ ಎಂದು ಬಾರಿಯಂಡ ಜೋಯಪ್ಪ ಮಾಹಿತಿ ನೀಡಿದರು.

ಅರೆಭಾಷೆ ಬೆಳವಣಿಗೆಗೆ ಹಿರಿಯರಾದ ಟಿ.ಜಿ. ಮುಡೂರು, ಎಂ.ಜಿ.ಕಾವೇರಮ್ಮ, ಪ್ರೊ.ಕೋಡಿ ಕುಶಾಲಪ್ಪ ಗೌಡ, ಡಾ.ಕಾವೇರಿ ಮನೆ ಬೋಜಪ್ಪ, ಕಟ್ರತನ ಬೆಳ್ಯಪ್ಪ ಪ್ರಮುಖರಾಗಿದ್ದಾರೆ. ಬಾಚರಣಿಯಂಡ ಅಪ್ಪಣ್ಣ, ಎಂ.ಇ.ಮಹಮ್ಮದ್, ಕೆ.ಟಿ.ಬೇಬಿ ಮ್ಯಾಥ್ಯೂ, ಕಟ್ಟ ಚಂಗಪ್ಪ, ನಾಗೇಶ್ ಕಾಲೂರು, ಸುಬ್ರಾಯ ಸಂಪಾಜೆ, ಐಸುಪ್ರಿಯಾ ಇಂದಿರಾ ಗಜರಾಜ್, ಜಬ್ಬಾರ್ ಸಮೊ ಪ್ರಮುಖರು ಅರೆಭಾಷೆ ಬೆಳವಣಿಗೆಗೆ ಕೊಡುಗೆ ನೀಡಿದ್ದಾರೆ ಎಂದರು.




Retired principal Bariyanda Joyappa inaugurates Arebhashe Day in Madikeri on Tuesday. (Right) Artistes perform a Yakshagana Talamaddale in Arebhashe on the occasion. DH PHOTOS

### 'Keep aside feelings of inferiority on language to save Arebhashe'

**Everyone must speak in their mother tongue: Retd principal**

MADIKERI, DHNS

Culture will be at stake if small, regional languages seize to exist, opined retired principal Bariyanda Joyappa.

He was speaking after inaugurating the Arebhashe Day and Arebhashe Yakshagana Talamaddale Koota organised by Karnataka Arebhashe Cultural and Literary Academy, held at Bharatiya Vidya Bhavan in Madikeri on Tuesday.

Quoting linguistics expert Ganesh N Devi, he said that around 400 languages out of 780 languages in the country are on the verge of extinction.

"Everyone, including those who are highly qualified in terms of education and are in good position, should speak in their mother tongue. One should not feel inferior about Arebhashe," he added.

Speaking on the occasion, Karnataka Arebhashe Cultural and Literary Academy chairman Lakshminarayana Kajegadde said that December 11 is the Foundation Day of the academy and the day is observed as Arebhashe Day.

He remembered stalwarts such as T G Muduru, M G Kaveramma, Prof Kodi Kushalappa Gowda, Dr Kaveri Mane Bojappa and Katratana Belyappa who had worked for the setting up of the academy.

**'Arebhashe in textbooks'**

Stating that Arebhashe language needs to find a place in textbooks as Tulu, he said the popularity of Arebhashe should be increased by using the language in Yakshagana and various forms of literature.

**'ISO recognition'**

Efforts will be on to obtain ISO recognition for Arebhashe. The Arebhashe Day is being observed in Bengaluru, Mysuru, Mangaluru and various other places as well, he said and added that several programmes are planned on the occasion of the decennial celebrations of Arebhashe Academy.

Kodagu Gowda Samaja Federation chairman Soortale Somanna said that the Kodagu Gowda Samaja will organise programmes in Arebhashe.

Kodagu Gowda Mahila Okkoota former president Radha Yadava recommended teaching Arebhashe to children.

The language should become part of their curriculum, she added.

Arebhashe Academy register Chinnaswamy, members Baitadka Janaki Bellyappa, Smitha Amritaraj, Chokkadi Prema Raghavaiah, Dhananjaya Agolikaje, Dambekodi S Anand, Dr K C Dayanand, A T Kusumadhar, Purushottama Kirlaya and Kodagu Gowda Yuva Vedike president Paikera Manohara Madappa were present.

An Arebhashe Yakshagana Talamaddale 'Panchavati Prasanga' was performed on the occasion.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಅರೆಭಾಷೆ ದಿನಾಚರಣೆ ಬಗ್ಗೆ
ಅರೆಭಾಷೆ ಯಕ್ಷಗಾನ ತಾಳಮದ್ದಲೆ ಕೂಟ

**ಪಂಚವಟಿ**

ದಿನ : 15-12-2020 ಮಂಗಳವಾರ
ಜಾಗೆ : ಭಾರತೀಯ ವಿದ್ಯಾಭವನ ಮಡಿಕೇರಿ

ಹಿಮ್ಮೇಳ
ಭಾಗವತರು : ಶ್ರೀ ಸುಬ್ರಾಯ ಸಂಪಾಜೆ
ಶ್ರೀಮತಿ ಭವ್ಯಶ್ರೀ ಕುಲ್ಕುಂದ
ಚೆಂಡೆ : ಶ್ರೀ ಚಂದ್ರಶೇಖರ ಗುರುವಾಯನಕೆರೆ
ಮದ್ದಲೆ : ಶ್ರೀ ಅಕ್ಷಯ ರಾವ್ ವಿಟ್ಲ
ಚಕ್ರತಾಳ : ಶ್ರೀ ಮುರಾರಿ ಭಟ್ ಪಂಜಿಗದ್ದೆ

ಅರ್ಥಗಾರಿಕೆ
ಶ್ರೀರಾಮ : ಶ್ರೀ ಜಯಾನಂದ ಸಂಪಾಜೆ
ಲಕ್ಷ್ಮಣ : ಶ್ರೀ ಕೊಳ್ತಿಗೆ ನಾರಾಯಣ ಗೌಡ
ಸೀತೆ : ಶ್ರೀ ರವಿಚಂದ್ರ ಚೆಂಬು
ಋಷಿಗ : ಶ್ರೀ ಕುಸುಮಾಧರ ಎ. ಟಿ.
ಶೂರ್ಪನಖಿ : ಶ್ರೀ ಜಬ್ಬಾರ್ ಸಮೊ ಸಂಪಾಜೆ

ಗಮನಿಸಿ:
- ಸರ್ಕಾರಿ ನಿಯಮದಂಗೆ ಕೋವಿಡ್-19ರ ನಿಯಮನ ಪಾಲಿಸೊಕು, ಮಾಸ್ಕ್ ಹಾಕೊಕು, ಸಾಮಾಜಿಕ ಅಂತರ ಕಾಪಾಡೊಕು

**ಭಾರತೀಯ ವಿದ್ಯಾಭವನ, ಮಡಿಕೇರಿ**

# ಅರೆಭಾಷೆ ದಿನಾಚರಣೆ

ತಾ. : 15–12–2020

## ಅರೆಭಾಷೆ ದಿನಾಚರಣೆ ಪ್ರಯುಕ್ತ ಉಪನ್ಯಾಸ.

**ಡಾ. ವಿಶ್ವನಾಥ ಬದಿಕಾನ**

ವಿಷಯ

**ಅರೆಭಾಷೆ ಬೆಳವಣಿಗೆ**

**ಡಾ. ಪುರುಷೋತ್ತಮ ಕೆವಿ ಕರಂಗಲ್ಲು**

ವಿಷಯ

**ಅರೆಭಾಷೆ ಸಾಹಿತ್ಯ**




ಹೊಸ ದಿಗಂತ — 10 — 18 Dec 2020

ಮಂಗಳೂರಿನ ತುಳುಭವನದಲ್ಲಿ ಅರೆಭಾಷೆ ದಿನಾಚರಣೆ

### ಅರೆಭಾಷೆ ಶಬ್ದಕೋಶ ರಚನೆಗೆ ಎಲ್ಲರ ಸಹಕಾರ ಅಗತ್ಯ: ವೆಂಕಟರಮಣ



**ಮಂಗಳೂರು:** ಅರೆಭಾಷೆ ಶಬ್ದಕೋಶ ರಚನೆಗೆ ಎಲ್ಲರೂ ಹೆಗಲು ಕೊಡಬೇಕು. ಭಾಷೆಯಲ್ಲಿ ಗಂಭೀರ ಸಾಹಿತ್ಯ ರಚನೆಗೆ ಪ್ರೋತ್ಸಾಹ ನೀಡಬೇಕು. ಅರೆಭಾಷಾ ಕಾರ್ಯಕ್ರಮವು ಟಿವಿ, ರೇಡಿಯೊ ಸೇರಿದಂತೆ ಎಲ್ಲ ಆಧುನಿಕ ಮಾಧ್ಯಗಳಲ್ಲಿ ಬರುವಂತೆ ಪ್ರಯತ್ನಿಸಬೇಕು ಎಂದು ಲೆಕ್ಕಪರಿಶೋಧಕ ವೆಂಕಟರಮಣ ಎಂ. ಹೇಳಿದರು.

ನಗರದ ತುಳು ಭವನದಲ್ಲಿ ಮಂಗಳ ವಾರ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಯಿಂದ ನಡೆದ 'ಅರೆಭಾಷೆ ದಿನಾಚರಣೆ'ಯಲ್ಲಿ ಅವರು ಮಾತನಾಡಿದರು.

ಭಾಷೆ ಮತ್ತು ಸಂಸ್ಕೃತಿಗೆ ಸಂಬಂಧ ವಿದೆ. ಸುಸಂಸ್ಕೃತ ಸಮಾಜ ಸೃಷ್ಟಿಸಲು ಭಾಷೆಯನ್ನು ಬೆಳೆಸುವ ಜವಾಬ್ದಾರಿಯು ನಾಗರಿಕರ ಮೇಲೆ ಇದೆ ಎಂದರು.

**ರಾಜಕೀಯಕ್ಕೂ ಅರೆಭಾಷೆ ಬೇಕು**

ಕಾರ್ಯಕ್ರಮ ಉದ್ಘಾಟಿಸಿ ಮಾತ ನಾಡಿದ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ ಅಧ್ಯಕ್ಷ ದಯಾನಂದ ಜಿ. ಕತ್ತಲ್‌ಸಾರ್, ತುಳು ಮತ್ತು ಅರೆಭಾಷಾ ಮಧ್ಯೆ ಅತ್ಯುತ್ತಮ ಸಂಬಂಧವಿದೆ. ಸುಳ್ಯದ ನೆಲದಲ್ಲಿ ರಾಜಕೀಯ ಚಟುವಟಿಕೆಗೂ ಅರೆಭಾಷೆ ತಿಳಿದಿರುವುದು ಮುಖ್ಯವಾಗಿದೆ ಎಂದರು.

> **ಮನೆ ಭಾಷೆಯಾಗಲಿ**
> **ಅರೆಭಾಷೆ ಮನೆ ಭಾಷೆಯಾದಾಗ ಮಾತ್ರ ಉಳಿದು ಬೆಳೆಯಲು ಸಾಧ್ಯ. ಬಳಕೆ ಮೂಲಕವೇ ಭಾಷೆ ಬೆಳೆಯಲು ಸಾಧ್ಯ.**
> ■ ಲೋಕಯ್ಯ ಗೌಡ

ದಕ್ಷಿಣ ಕನ್ನಡ ಜಿಲ್ಲಾ ಒಕ್ಕಲಿಗರ ಯಾನೆ ಗೌಡರ ಸಂಘದ ಮಾಜಿ ಅಧ್ಯಕ್ಷ ಲೋಕಯ್ಯ ಗೌಡ ಮಾತನಾಡಿದರು.

ಸಂತ ಅಲೋಷಿಯಸ್ ಕಾಲೇಜಿನ ಸಹಾಯಕ ಪ್ರಾಧ್ಯಾಪಕ ಡಾ. ವಿಶ್ವನಾಥ ಬದಿಕಾನ ಮತ್ತು ಐಕಳ ಪೊಂಪೈ ಕಾಲೇಜು ಪ್ರಾಂಶುಪಾಲ ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು ಉಪನ್ಯಾಸ ನೀಡಿದರು.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಸದಸ್ಯ ಭರತೇಶ ಅಲಸಂಡೆಮಜಲು, ಮಾಜಿ ಸದಸ್ಯ ಡಾ.ದಾಮೋದರ ನಾರಾಲ್, ಮಂಗಳೂರು ಒಕ್ಕಲಿಗ ಯಾನೆ ಗೌಡರ ಸೇವಾ ಸಂಘದ ಅಧ್ಯಕ್ಷೆ ಸೌಮ್ಯ ಸುಕುಮಾರ್, ಯುವ ಘಟಕದ ಅಧ್ಯಕ್ಷ ಕಿರಣ್ ಬುಡ್ಲೆಗುತ್ತು ಉಪಸ್ಥಿತರಿದ್ದರು.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

**ಅರೆಬಾಸೆ ದಿನಾಚರಣೆ**

[15.12.2011ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಕರ್ನಾಟಕ ಸರ್ಕಾರ ಅಧಿಕೃತವಾಗಿ ಘೋಷಣೆ ಮಾಡ್ದ ದಿನ]

ದಿನ : 15.12.2020 ಮಂಗಳವಾರ - ಹಿಂಬೊತ್ತು 6.00 ಗಂಟೆಗೆ
ಜಾಗೆ : ತುಳು ಭವನ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಉರ್ವಸ್ಟೋರ್, ಮಂಗಳೂರು

ಅಧ್ಯಕ್ಷರ್ : **ಶ್ರೀ ವೆಂಕಟರಮಣ ಎಂ.** ಚಾರ್ಟರ್ಡ್ ಅಕೌಂಟೆಂಟ್ ಮಂಗಳೂರು

ಗೌರವ ಉಪಸ್ತಿತಿ : **ಶ್ರೀ ದಯಾನಂದ ಜಿ. ಕತ್ತಲ್‌ಸಾರ್**
ಅಧ್ಯಕ್ಷರ್ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು
**ಶ್ರೀ ಲೋಕಯ್ಯ ಗೌಡ ಕೆ.**
ಮಾಜಿ ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಡಾ. ದಾಮೋದರ ನಾರಾಲ್**
ಪ್ರಾಧ್ಯಾಪಕರ್, ರಸಾಯನಶಾಸ್ತ್ರ ವಿಭಾಗ, ಕೆನರಾ ಇಂಜಿನಿಯರಿಂಗ್ ಕಾಲೇಜು, ಮಂಗಳೂರು

ಉಪನ್ಯಾಸ 1 : **ಡಾ. ವಿಶ್ವನಾಥ ಬದಿಕಾನ**
ಸಹಾಯಕ ಪ್ರಾಧ್ಯಾಪಕರ್, ಕನ್ನಡ ವಿಭಾಗ, ಸಂತ ಅಲೋಶಿಯಸ್ ಕಾಲೇಜು, ಮಂಗಳೂರು
ವಿಸಯ : ಅರೆಬಾಸೆ ಬೆಳವಣಿಗೆ

ಉಪನ್ಯಾಸ 2 : **ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು**
ಪ್ರಾಂಶುಪಾಲರ್, ಪೊಂಪೈ ಕಾಲೇಜು, ಐಕಳ
ವಿಸಯ : ಅರೆಬಾಸೆ ಸಾಹಿತ್ಯ

ನೆಂಟ್ರ್‌ಗ : **ಶ್ರೀಮತಿ ಸೌಮ್ಯ ಸುಕುಮಾರ್**
ಅಧ್ಯಕ್ಷರ್, ಮಹಿಳಾ ಘಟಕ, ಒಕ್ಕಲಿಗ ಯಾನೆ ಗೌಡರ ಸೇವಾ ಸಂಘ ಲೇಡಿಹಿಲ್, ಮಂಗಳೂರು
**ಶ್ರೀ ಕಿರಣ್ ಬುಡ್ಲೆಗುತ್ತು**
ಅಧ್ಯಕ್ಷರ್, ಯುವಘಟಕ, ಒಕ್ಕಲಿಗ ಯಾನೆ ಗೌಡರ ಸೇವಾ ಸಂಘ ಲೇಡಿಹಿಲ್, ಮಂಗಳೂರು

***** ಪ್ರೀತಿಪೂರ್ವಕ ಸ್ವಾಗತ ಬಯಸುವವು *****

| ಭರತೇಶ್ ಅಲಸಂಡೆಮಜಲು | ಚಿನ್ನಸ್ವಾಮಿ | ಲಕ್ಷ್ಮೀನಾರಾಯಣ ಕಜೆಗದ್ದೆ |
|---|---|---|
| ಸಂಚಾಲಕರ್ | ರಿಜಿಸ್ಟ್ರಾರ್ | ಅಧ್ಯಕ್ಷರ್ |

ಅಕಾಡೆಮಿ ಸದಸ್ಯರ್

ಬೈತಡ್ಕ ... ಅಗೋಳಿಕಜೆ ... ಬದಿಕಾನ

**ತುಳು ಭವನ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಉರ್ವಸ್ಟೋರ್, ಮಂಗಳೂರು**

### ಮೈಸೂರು ಕೊಡಗು ಗೌಡ ಸಮಾಜದ ವತಿಯಿಂದ ಅರೆಬಾಷೆ ದಿನಾಚರಣೆ



**ಮಡಿಕೇರಿ:** ಮೈಸೂರು ಕೊಡಗು ಗೌಡ ಸಮಾಜದ ವತಿಯಿಂದ ಡಿ. 15ರ ಮಂಗಳವಾರ, ಅರೆಬಾಷೆ ದಿನಾಚರಣೆಯನ್ನು ಆಚರಿಸಲಾಯಿತು.

ಅಧ್ಯಕ್ಷರಾದ ತೋಟಂಬೈಲು ಮನೋಹರ್ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ, ನಿವೃತ್ತ ಅರಣ್ಯಾಧಿಕಾರಿ ಕೊಡಕಂಡಿ ಬೆಳ್ಯಪ್ಪನವರು ದೀಪ ಬೆಳಗುವುದರೊಂದಿಗೆ ಉದ್ಘಾಟಿಸಲಾಯಿತು. ಕೊಡಗು ಗೌಡ ಮಾಜಿ ಸೈನಿಕರ ಅಧ್ಯಕ್ಷರಾದ ಶ್ರೀ ಚಂಡೀರ ಬಸಪ್ಪ, ಕೊಡಗು ಗೌಡ ಮತ್ತು ದಕ್ಷಿಣ ಕನ್ನಡ ಗೌಡ ಮಹಿಳಾ ಸಂಘದ ಅಧ್ಯಕ್ಷರಾದ ದೇವಜನ ಗೀತಾ, ಕೊಡಗು ಗೌಡ ಯುವವೇದಿಕೆಯ ಉಪಾಧ್ಯಕ್ಷ ಕೋಳಿಮುಡಿಯನ ಗಿರೀಶ್ ಮತ್ತು ಅರೆಬಾಷೆ ವಾಗ್ಮಿ ಪಟ್ಟಡ ಶಿವಕುಮಾರ್ ಉಪಸ್ಥಿತರಿದ್ದರು.

**ಕೊಡಗು ಗೌಡ ಸಮಾಜ, ಮೈಸೂರು**




**ದ.ಕ ಮತ್ತು ಕೊಡಗು ಗೌಡ ಸಮಾಜ, ಬೆಂಗಳೂರು**

### ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದಿಂದ ಅರಭಾಷಾ ದಿನಾಚರಣೆ



**ಮಡಿಕೇರಿ:** "ಅರೆಭಾಷೆ ದಿನಾಚರಣೆ" ...ಗವಾಗಿ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ...ಮಾಜ(ರಿ), ಬೆಂಗಳೂರು ಇದರ ...ಗ್ರೆಯಲ್ಲಿರುವ "ನಮ್ಮನೆ ಸಾಂಸ್ಕೃತಿಕ ಕಲಾ ...ದ್ರದಲ್ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ...ಹಿತ್ಯ ಅಕಾಡೆಮಿಯ ಸಹಯೋಗದೊಂದಿಗೆ ...ಜೆ 7:30ಕ್ಕೆ ಸಭಾ ಕಾರ್ಯಕ್ರಮ ಹಾಗು ...ಂಸ್ಕೃತಿಕ ಕಾರ್ಯಕ್ರಮಗಳು ಜರುಗಿದವು.

ವೇದಿಕೆಯಲ್ಲಿ ಸಮಾಜದ ಅಧ್ಯಕ್ಷರಾದ ...ಜೇಶ್ ತೇನನ, ಉಪಾಧ್ಯಕ್ಷರಾದ ...ವೀಂದ್ರನಾಥ್ ಕೇವಳ, ಜಂಟಿ ...ರ್ಯದರ್ಶಿಗಳಾದ ಸೋಮಣ್ಣ ಕುಂಬಗೌಡನ, ...ಹಿಳಾ ಘಟಕದ ಅಧ್ಯಕ್ಷಿಣಿ ಗೀತಾ ...ಿಂದ್ರನಾಥ್ ಕೇವಳ, ಯುವ ಘಟಕದ ...ರ್ಯದರ್ಶಿ ದಿಲೀಪ್ ಮೂಲೆಮಜಲು ...ಗೂ ಸಮಾರಂಭಕ್ಕೆ ಅತಿಥಿಗಳಾಗಿ ...ಟಪೂರ್ವ ಅಧ್ಯಕ್ಷರಾದ ಪದ್ಮನಾಭ ಕೋಲ್ಚಾರ್, ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಅರೆಭಾಷೆ ಸಾಹಿತಿ, ಕವಿ ಭವಾನಿಶಂಕರ ಹೊದ್ದೆಟ್ಟಿ, ಅರೆಭಾಷೆಗೆ ಹೊಸ ಚೈತನ್ಯ ತಂದು ಹಾಡು, ಸಂಸ್ಕೃತಿಗೆ ಪ್ರದರ್ಶನ ಕಲೆಯ ರೂಪ ಕೊಟ್ಟು ಬೆಳೆಸಿದ ಅಮ್ಮಾಜಿರ ಪೊನ್ನಪ್ಪ, ಅಮೇರಿಕಾದಲ್ಲಿ ನೆಲಸಿದ್ದರೂ, ಭಾಷೆಗೆ, ಬಂಧುಗಳಿಗೆ, ಸಮಾಜದ ಕೆಲಸ ಕಾರ್ಯಗಳಿಗೆ ಸ್ಪಂದಿಸುವ ಓಂಪ್ರಕಾಶ್ ಮದುವೆಗದ್ದೆ ಇವರುಗಳು ವೇದಿಕೆಯನ್ನು ಅಲಂಕರಿಸಿದ್ದರು.

ಭೂಮಿಕಾ ಉಳುವಾರು ಅವರ ಪ್ರಾರ್ಥನೆ ಹಾಗೂ ಅತಿಥಿಗಣ್ಯರಿಂದ ದೀಪ ಬೆಳಗುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಅಧ್ಯಕ್ಷರಾದ ರಾಜೇಶ್ ತೇನನ ಎಲ್ಲರನ್ನೂ ಸ್ವಾಗತಿಸಿ, "ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ" ಸ್ಥಾಪನೆ ಹಿನ್ನೆಲೆ ಹಾಗು ಭಾಷೆಯ ಬೆಳವಣಿಗೆಗೆ ಪೂರಕವಾದ ಅಂಶಗಳ ಬಗ್ಗೆ ಬೆಳಕು ಚೆಲ್ಲಿದರು.

ಅತಿಥಿಗಳಾದ ಪದ್ಮನಾಭ ಕೋಲ್ಚಾರ್‌ರವರು ಅರೆಭಾಷೆಯ ಹಾಗು ಅರೆಭಾಷಿಕ ಗೌಡರ ಸಂಸ್ಕೃತಿ, ಸಾಹಿತ್ಯದ ವಿವಿಧ ಬೆಳವಣಿಗೆಗಳ ಬಗ್ಗೆ ಸಭೆಗೆ ಮನನ ಮಾಡಿದರು.

ಭವಾನಿಶಂಕರ ಹೊದ್ದೆಟ್ಟಿಯವರು ತಮ್ಮ ಸಾಹಿತ್ಯಾನುಭವವನ್ನು ಹಂಚಿಕೊಂಡರಲ್ಲದೆ, ಹಲವು ಅರೆಭಾಷೆ ಚುಟುಕ ಹಾಗೂ ಹಾಡನ್ನು ಹಾಡಿ ಎಲ್ಲರ ಮನರಂಜಿಸಿದರು.

ಓಂಪ್ರಕಾಶ್ ಮದುವೆಗದ್ದೆ ಇವರು ಕಳೆದ ಮೂರು ದಶಕಗಳಿಂದ ಅಮೇರಿಕಾದ ಕ್ಯಾಲಿಫೋರ್ನಿಯಾದಲ್ಲಿ ನೆಲೆಸಿದ್ದರೂ, ಮುಂದಿನ ಪೀಳಿಗೆಗೆ ಭಾಷೆಯನ್ನು ಉಳಿಸಿ ಬೆಳೆಸಲು ಕರೆಕೊಟ್ಟರಲ್ಲದೆ, ತಮ್ಮ ಸಂಪೂರ್ಣ ಬೆಂಬಲ, ಸಹಕಾರವನ್ನು ಕೊಡುವುದಾಗಿಯು, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಸ್ಥಾಪನೆಗೆ ಕಾರಣಕರ್ತರಾ ಗೆಲ್ಲರಿಗೂ ಅಭಿನಂದನೆ ಸಲ್ಲಿಸಿದರು.

ಹಾಗೆಯೆ ಪೊನ್ನಪ್ಪ ಅಮ್ಮಾಜಿರರವರು ತಮ್ಮ ಬಾಲ್ಯದ ಘಟನೆಗಳಿಂದ ಹಿಡಿದು ಅರೆಭಾಷೆಯ ಮೊಟ್ಟಮೊದಲ ಟೇಪ್ ಕ್ಯಾಸೆಟ್ ನಲ್ಲಿ ಹಾಡುಗಳ ಸರಮಾಲೆ "ಪೊನಿದ್ವನಿ" ಹಿನ್ನೆಲೆ ಹಾಗೂ ಅನುಭವ ಹಂಚಿಕೊಂಡರಲ್ಲದೆ ಅರೆಭಾಷೆಯ ಹಾಡನ್ನು ಸಭೀಕರು ಜೊತೆಯಲ್ಲಿ ಹಾಡಿ, ಎಲ್ಲರೂ ಮನ ರಂಜಿಸಿದರು.

ಸುಮಾರು ಇನ್ನೂರಕ್ಕೂ ಅಧಿಕ ಬೆಂಗಳೂರಿನ ವಿವಿಧ ಭಾಗಗಳಲ್ಲಿ ನೆಲೆಸಿರುವ ಸಮಾಜ ಬಂದುಗಳು ಬಿಡುವು ಮಾಡಿಕೊಂಡು ಸಂಜೆಯ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಕಾರ್ಯಕ್ರಮವನ್ನು ರಾಜೇಶ್ ಅಂಬೆಕಲ್ಲು ನಿರೂಪಿಸಿದರು ಹಾಗು ಸಮಾಜದ ಉಪಾಧ್ಯಕ್ಷರಾದ ರವೀಂದ್ರನಾಥ್‌ರವರು ವಂದನಾರ್ಪಣೆ ನೆರವೇರಿಸಿದರು. ನಂತರ ಸಹಭೋಜನ, ವಾಲಗ ಕುಣಿತದೊಂದಿಗೆ ಕಾರ್ಯಕ್ರಮವನ್ನು ಮುಗಿಸಲಾಯಿತು.

# ಸಾಹೇಬ್ರು ಬಂದವೇ
## ನಾಟಕ ಪ್ರದರ್ಶನ
ನಿರ್ದೇಶನ: ಜೀವನ್‌ರಾಂ ಸುಳ್ಯ

ತಾ. : 01-01-2021







ರಂಗಾಯಣ ಶಿವಮೊಗ್ಗ

ತಾ. : 02-01-2021







ನಟ ಮಿತ್ರರು, ತೀರ್ಥಹಳ್ಳಿ

ತಾ. : 03–01–2021

ತಾ. : 04–01–2021

# ಸಾಹೇಬ್ರು ಬಂದವೇ
## ನಾಟಕ ಪ್ರದರ್ಶನ
ನಿರ್ದೇಶನ: ಜೀವನ್‌ರಾಂ ಸುಳ್ಯ







ಆಳ್ವಾಸ್ ನುಡಿಸಿರಿ ಘಟಕ, ಕುಂದಾಪುರ








ಸುರಭಿ ಬೈಂದೂರು



### ಕುಂದಾಪ್ರ ಕನ್ನಡ ಅಕಾಡೆಮಿ ಸ್ಥಾಪನೆಗೆ ಯತ್ನ
'ಸಾಹೇಬ್ರು ಬಂದವೇ' ನಾಟಕ ಪ್ರದರ್ಶನದ ಸಭೆಯಲ್ಲಿ ಶಾಸಕ ಸುಕುಮಾರ ಶೆಟ್ಟಿ

ಪ್ರಜಾವಾಣಿ ವಾರ್ತೆ

ಬೈಂದೂರು: 'ಕುಂದಾಪ್ರ ಕನ್ನಡ ಭಾಷೆ ತನ್ನ ಮೂಲ ಸೊಗಡನ್ನು ಕಳೆದುಕೊಳ್ಳುತ್ತಿರುವುದು ವಿಷಾದದ ಸಂಗತಿ. ಅದರ ಪುನಶ್ಚೇತನಕ್ಕೆ ಅಕಾಡೆಮಿ ರಚಿಸಲು ಮುಖ್ಯಮಂತ್ರಿ ಬಳಿಗೆ ನಿಯೋಗ ಒಯ್ಯಲಾಗುವುದು' ಎಂದು ಶಾಸಕ ಬಿ.ಎಂ. ಸುಕುಮಾರ ಶೆಟ್ಟಿ ಹೇಳಿದರು.

ಇಲ್ಲಿನ ಶಾರದಾ ವೇದಿಕೆಯಲ್ಲಿ ಸುರಭಿ ಕಲಾಸಂಸ್ಥೆ, ಬೈಂದೂರು ಸಿಟಿ ಜೇಸಿಐ ಹಾಗೂ ಹೊಸೂರಿನ ಸಂಚಲನ ಆಶ್ರಯದಲ್ಲಿ ಸೋಮವಾರ ನಡೆದ ಕರ್ನಾಟಕ ಅರೆಭಾಷೆ, ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ರಂಗ ಪ್ರಸ್ತುತಿ 'ಸಾಹೇಬ್ರು ಬಂದವೇ' (ಸಾಹೇಬರು ಬರುತ್ತಾರೆ) ನಾಟಕ ಪ್ರದರ್ಶನದ ಸಭಾ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು.

'ಕುಂದಾಪ್ರ ಕನ್ನಡ ಭಾಷಿಕರಲ್ಲಿ ಕರಾವಳಿಯ ಕ್ರಿಯಾಶೀಲತೆ ಹಾಗೂ ಘಟ್ಟದ ಗಡಸುತನ ಮೇಳೈಸಿದ್ದು, ಉಳಿದೆಲ್ಲ ಪ್ರದೇಶಗಳ ಜನರಿಗಿಂತ ಅವರು ಭಿನ್ನರಾಗಿದ್ದಾರೆ. ಕುಂದಾಪುರದ ಜನರು ನೇರನುಡಿ ಯವರಾದರೂ, ಅಪಾರ ಪ್ರೀತಿ, ವಿಶ್ವಾಸ ತೋರ್ಪಡಿಸುತ್ತಾರೆ' ಎಂದ ಶಾಸಕರು 'ಸುಳ್ಯದ ಅರೆಭಾಷೆಗೂ ಕುಂದಾಪುರದ ಕುಂದಗನ್ನಡಕ್ಕೂ ಸಾಮ್ಯತೆ ಇದೆ. ನಾಟಕದ ಮೂಲಕ ಅರೆಭಾಷೆಯನ್ನು ಎಲ್ಲೆಡೆ ಪಸರಿಸುವ ಕೆಲಸ ಅಕಾಡೆಮಿ ಮಾಡುತ್ತಿರುವುದು ಶ್ಲಾಘನೀಯ' ಎಂದರು.

ಸಾಹೇಬ್ರು ಬಂದವೇ ನಾಟಕದ ನಿರ್ದೇಶಕ ಜೀವನರಾಂ ಸುಳ್ಯ ಸುರಭಿಯ ಲಾಂಛನ ನಾವರಣಗೊಳಿಸಿ ಅರೆಭಾಷೆಯನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಅಕಾಡೆಮಿ ಕ್ರಿಯಾಶೀಲವಾಗಿದ್ದು, ಮೊದಲ ಹಂತದಲ್ಲಿ ನಾಟಕ ಪ್ರದರ್ಶನದ ಮೂಲಕ ಜನಸಾಮಾನ್ಯರನ್ನು ತಲುಪಲು ಯೋಚಿಸಿದೆ' ಎಂದರು. ಸುರಭಿ ಅಧ್ಯಕ್ಷ ನಾಗರಾಜ ಪಿ. ಯಡ್ತರೆ ಸ್ವಾಗತಿಸಿ, ಸಂಚಲನದ ರಾಜು ಮರಾಠಿ ವಂದಿಸಿದರು. ಸುರಭಿ ನಿರ್ದೇಶಕ ಸುಧಾಕರ ಪಿ. ನಿರೂಪಿಸಿದರು.

ನೇಹಿಗ ಜೀವನರಾಂ ಪ್ರಾರ್ಥಿಸಿದರು. ಕರ್ನಾಟಕ ಅರೆಭಾಷೆ ಅಕಾಡೆಮಿಯ ಸದಸ್ಯ ಎ. ಟಿ. ಕುಸುಮಾಕರ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿ ಸುಬ್ರಹ್ಮಣ್ಯ ಶೆಟ್ಟಿ, ಬೈಂದೂರು ಸಿಟಿ ಜೇಸಿಐ ಸ್ಥಾಪಕಾಧ್ಯಕ್ಷ ಮಣಿಕಂಠ ದೇವಾಡಿಗ, ಸಂಚಲನ ಅಧ್ಯಕ್ಷ ಮಹದೇವ ಮರಾಠಿ, ಸುರಭಿ ಕಾರ್ಯದರ್ಶಿ ಭಾಸ್ಕರ ಬಾಡ ಇದ್ದರು. ಸಭಾ ಕಾರ್ಯಕ್ರಮದ ಬಳಿಕ 'ಸಾಹೇಬ್ರು ಬಂದವೇ' ನಾಟಕ ಪ್ರದರ್ಶನಗೊಂಡಿತು.

ಬೈಂದೂರಿನಲ್ಲಿ ಸೋಮವಾರ ನಡೆದ ಅರೆಭಾಷೆ ನಾಟಕ ಪ್ರದರ್ಶನದ ಸಭಾ ಕಾರ್ಯಕ್ರಮದಲ್ಲಿ ಜೀವನರಾಂ ಸುಳ್ಯ ಸುರಭಿ ಲಾಂಛನ ಬಿಡುಗಡೆಗೊಳಿಸಿದರು.

**ಮುಖ್ಯಾಂಶಗಳು**
- 'ಸುಳ್ಯದ ಅರೆಭಾಷೆಗೂ ಕುಂದಾಪುರದ ಕುಂದಗನ್ನಡಕ್ಕೂ ಸಾಮ್ಯತೆ ಇದೆ'
- 'ಕುಂದಾಪ್ರ ಕನ್ನಡಿಗರಲ್ಲಿ ಕರಾವಳಿಯ ಕ್ರಿಯಾಶೀಲತೆ, ಘಟ್ಟದ ಗಡಸುತನ'
- 'ನಾಟಕದಿಂದ ಅರೆಭಾಷೆ ಪ್ರಚಾರದ ಅಕಾಡೆಮಿ ಕಾರ್ಯ ಶ್ಲಾಘನೀಯ'

ತಾ. : 06-01-2021ರಿಂದ 07-01-2021

ತಾ. : 08-01-2021

# ಸಾಹೇಬ್ರು ಬಂದವೇ

## ನಾಟಕ ಪ್ರದರ್ಶನ

ನಿರ್ದೇಶನ: ಜೀವನ್‌ರಾಂ ಸುಳ್ಯ









ಆಳ್ವಾಸ್
ಮೂಡಬಿದ್ರೆ







**ಕನಕಮಜಲು ಯುವಕ ಮಂಡಲದ ವತಿಯಿಂದ ಸಾಂಸ್ಕೃತಿಕ ಕಾರ್ಯಕ್ರಮ ಮತ್ತು ಗೌರವಾರ್ಪಣೆ**

suddi 08-03-2021

**ಸಾಹೇಬ್ರು ಬಂದವೇ ಅರೆಭಾಷೆ ನಾಟಕ ಪ್ರದರ್ಶನ**

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ಯುವಕ ಮಂಡಲ ಕನಕಮಜಲು ಇದರ ವತಿಯಿಂದ ಸಾಂಸ್ಕೃತಿಕ ಕಾರ್ಯಕ್ರಮ ಮತ್ತು ಗೌರವಾರ್ಪಣೆ ಹಾಗೂ ಸಾಹೇಬ್ರು ಬಂದವೇ ಅರೆಭಾಷೆ ನಾಟಕ ಪ್ರದರ್ಶನವು ಮಾ.6ರಂದು ಸಂಜೆ ಕನಕಮಜಲಿನ ಶ್ರೀ ನ.ರಾ.ಗೌ.ಸ.ಮಾ.ಹಿ.ಪ್ರಾ.ಶಾಲೆಯ ರಂಗಭಾವಡಿಯಲ್ಲಿ ಜರುಗಿತು.

ಕನಕಮಜಲು ಗ್ರಾಮ ಪಂಚಾಯತಿ ಅಧ್ಯಕ್ಷ ಶ್ರೀಧರ ಕುತ್ಯಾಳ ಅವರು ಅಧ್ಯಕ್ಷತೆ ವಹಿಸಿದ್ದರು.

ಈ ಸಂದರ್ಭದಲ್ಲಿ ಶತಾಯುಷಿ ಮೋನಪ್ಪ ಗೌಡ ಕೊರಂಬಡ್ಕ ಅವರನ್ನು ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸಂಘ ಚಾಲಕ ಚಂದ್ರಶೇಖರ ತಳೂರು ಅವರು ಗೌರವಾರ್ಪಣೆ ಮಾಡಿ, ಶುಭಹಾರೈಸಿದರು.

ಮುಖ್ಯ ಅತಿಥಿಗಳಾಗಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ, ತಾ.ಪಂ. ಸದಸ್ಯ ತೀರ್ಥರಾಮ ಬಾಳಾಜೆ, ಸಾಹೇಬ್ರು ಬಂದವೇ ಅರೆಭಾಷೆ ನಾಟಕದ ನಿರ್ದೇಶಕ ಜೀವನ್ ರಾಂ ಸುಳ್ಯ, ಯುವಕ ಮಂಡಲದ ಅಧ್ಯಕ್ಷ ಜಯಪ್ರಸಾದ್ ಕಾರಿಂಜ, ಪ್ರ.ಕಾರ್ಯದರ್ಶಿ ಬಾಲಚಂದ್ರ ನೆಡಿಲು, ಸಾಂಸ್ಕೃತಿಕ ಕಾರ್ಯದರ್ಶಿ ಅಶ್ವಥ್ ಅಡ್ಕಾರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಅಧ್ಯಕ್ಷ ಜಯಪ್ರಸಾದ್ ಕಾರಿಂಜ ಸ್ವಾಗತಿಸಿ, ಪ್ರ.ಕಾರ್ಯದರ್ಶಿ ಬಾಲಚಂದ್ರ ನೆಡಿಲು ವಂದಿಸಿದರು. ಉಪನ್ಯಾಸಕ ದಾಮೋದರ ಗೌಡ ಕಣಜಾಲು ಕಾರ್ಯಕ್ರಮ ನಿರೂಪಿಸಿದರು.

ಸಭಾ ಕಾರ್ಯಕ್ರಮದ ಬಳಿಕ ರಾತ್ರಿ 7.30ರಿಂದ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಪ್ರಸ್ತುತಪಡಿಸುವ ಅರೆಭಾಷೆ ನಾಟಕ ಸಾಹೇಬ್ರು ಬಂದವೇ ಪ್ರದರ್ಶನಗೊಂಡಿತು.

ಈ ಸಂದರ್ಭದಲ್ಲಿ ನಾಟಕವನ್ನು ಅರೆಭಾಷೆಗೆ ಅನುವಾದಗೊಳಿಸಿದ ಪತ್ರಕರ್ತ ಜಯಪ್ರಕಾಶ್ ಕುಕ್ಕೇಟಿ ಸೇರಿದಂತೆ ಅನೇಕ ಮಂದಿ ಪ್ರೇಕ್ಷಕರು ಉಪಸ್ಥಿತರಿದ್ದರು.

ರಂಗ ಮಂಡಲ
ಕನಕಮಜಲು

ತಾ. : 09–01–2021

ತಾ. : 10–01–2021

# ಸಾಹೇಬ್ರು ಬಂದವೇ
## ನಾಟಕ ಪ್ರದರ್ಶನ

ನಿರ್ದೇಶನ: ಜೀವನ್‌ರಾಂ ಸುಳ್ಯ












▶ಅರೆಭಾಷೆ ರಂಗಪಯಣ: ಸಾಹೇಬ್ರು ಬಂದವೇ ನಾಟಕ ಪ್ರದರ್ಶನ

**ಅರೆಭಾಷೆ ಬೆಳವಣಿಗೆಗೆ ರಂಗ ಮಾಧ್ಯಮ ಸಹಕಾರಿ: ಮಠಂದೂರು**

ಕಟ್ಟುವ ಕಾರ್ಯ

ಪುತ್ತೂರು ಪುರಭವನದಲ್ಲಿ ನಾಟಕ ಪ್ರದರ್ಶನ ಉದ್ಘಾಟಿಸಲಾಯಿತು.

ಬಾಲವನ ಪುತ್ತೂರು










**ವಿಜಯ ಕರ್ನಾಟಕ**

**ಸಾಹೇಬ್ರ ಮೋಡಿಗೆ ಜನ ಫಿದಾ**

ರಂಗಪ್ರೇಮಿಗಳಿಗೆ ರಸದೌತಣ ಉಣಬಡಿಸಿದ ಅರೆಭಾಷೆಯ 'ಸಾಹೇಬ್ರು ಬಂದವೇ' ನಾಟಕ

**ಅರೆಭಾಷೆಯಲ್ಲಿ ಚಲನಚಿತ್ರ ನಿರ್ಮಾಣ ಮಾಡುವಂತಾಗಲಿ**

ಅಪರೂಪದ ಪದಗಳ ಬಳಕೆ




ಸಂತ ಜೋಸೆಫರ ವಿದ್ಯಾಸಂಸ್ಥೆ ಆವರಣ, ಮಡಿಕೇರಿ

# ಸಾಹೇಬ್ರು ಬಂದವೇ
## ನಾಟಕ ಪ್ರದರ್ಶನ
ನಿರ್ದೇಶನ: ಜೀವನ್‌ರಾಂ ಸುಳ್ಯ

**ತಾ. : 11–01–2021**



**ಪಾದುವ ಕಾಲೇಜು, ಮಂಗಳೂರು**

### ಇಂದು 'ಸಾಹೇಬ್ರು ಬಂದವೇ' ಅರೆಭಾಷೆ ನಾಟಕ

ಮಂಗಳೂರು: ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಪ್ರಸ್ತುತಿಯಲ್ಲಿ ಜ.11ರಂದು ಸಂಜೆ 6.30ಕ್ಕೆ ನಗರದ ನಂತೂರು ಬಳಿಯ ಪಾದುವ ಕಾಲೇಜಿನಲ್ಲಿ 'ಸಾಹೇಬ್ರು ಬಂದವೇ' ಅರೆಭಾಷೆ ನಾಟಕ ಪ್ರದರ್ಶನಗೊಳ್ಳಲಿದೆ.

ಜಯಪ್ರಕಾಶ್ ಕುಕ್ಕೇಟಿ ಅರೆಭಾಷೆಗೆ ಅನುವಾದಿಸಿರುವ ಈ ನಾಟಕವನ್ನು ಜೀವನ್ ರಾಂ ಸುಳ್ಯ ನಿರ್ದೇಶಿಸಿದ್ದಾರೆ. ಅಸ್ತಿತ್ವ ಮಂಗಳೂರು ವತಿಯಿಂದ ಪಾದುವ ರಂಗ ಅಧ್ಯಯನ ಕೇಂದ್ರ, ಅರೆಹೊಳೆ ಪ್ರತಿಷ್ಠಾನ ಸಹಕಾರದಲ್ಲಿ ರಂಗಹಬ್ಬ 2021 – ಬಹುಭಾಷಾ ನಾಟಕೋತ್ಸವ ಅಂಗವಾಗಿ ಈ ನಾಟಕ ಪ್ರದರ್ಶನಗೊಳ್ಳಲಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಹಯೋಗದೊಂದಿಗೆ ನಡೆಯುವ ನಾಟಕಕ್ಕೆ ಪ್ರವೇಶ ಉಚಿತ ಎಂದು ಪ್ರಕಟಣೆ ತಿಳಿಸಿದೆ.

**ತಾ. : 13–01–2021**

ಸುಬ್ರಹ್ಮಣ್ಯದಲ್ಲಿ 'ಸಾಹೇಬ್ರು ಬಂದವೇ' ನಾಟಕ ಪ್ರದರ್ಶನ

### ರಂಗಭೂಮಿಯಿಂದ ಭಾಷೆಯ ವಿಸ್ತರಣೆ

ಪ್ರಜಾವಾಣಿ ವಾರ್ತೆ

ಸುಬ್ರಹ್ಮಣ್ಯ: ಅರೆಭಾಷೆ ಹಾಗೂ ಸಂಸ್ಕೃತಿ ನಮ್ಮ ಗಡಿಯನ್ನು ದಾಟಿಸಿ ವಿಸ್ತರಿಸಲು ಅತ್ಯುತ್ತಮ ವೇದಿಕೆ ರಂಗಭೂಮಿ. ಅರೆಭಾಷೆಯನ್ನು ಎತ್ತರಕ್ಕೆ ಕೊಂಡೊಯ್ಯುವ ಪ್ರಯತ್ನ ನಡೆಯುತ್ತಿದೆ' ಎಂದು ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಲಕ್ಷ್ಮಿ ನಾರಾಯಣ ಕಜೆಗದ್ದೆ ಹೇಳಿದರು.

ಸುಬ್ರಹ್ಮಣ್ಯದ ಕೆಎಸ್‌ಎಸ್ ಕಾಲೇಜಿನಲ್ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಯಿಂದ ಸಾಹೇಬ್ರು ಬಂದವೇ ನಾಟಕ ಕಾಲೇಜಿನ ಕುಸುಮಸಾರಂಗ ಘಟಕದ ಸಹಕಾರದಲ್ಲಿ ಬುಧವಾರ ನಡೆದ ಪ್ರದರ್ಶನದ ಸಭಾ ಕಾರ್ಯಕ್ರಮದಲ್ಲಿ ಮಾತನಾಡಿದರು.

'ಸುಳ್ಯ ಭಾಗದಲ್ಲಿ ಅರೆಭಾಷೆ ಪ್ರಚಲಿತವಾಗಿದೆ. ಅರೆಭಾಷೆ ಸಾಹಿತ್ಯ ಕಾರ್ಯಕ್ರಮ ಅನುಷ್ಠಾನಕ್ಕೆ ಕಾಲೇಜಿನಲ್ಲಿ ಉತ್ತಮ ಸಹಕಾರ ನೀಡಿದ್ದರಿಂದ ಕಾರ್ಯಕ್ರಮ ನಡೆಯಿತು. ಅರೆಭಾಷೆ ಅಕಾಡೆಮಿ ಇರುವುದು ಭಾಷೆಯ ಬೌದ್ಧಿಕ ಸಾಮರ್ಥ್ಯವನ್ನು ಒಂದಷ್ಟು ಎತ್ತರಕ್ಕೆ ಕೊಂಡೊಯ್ಯಲು. ನಮ್ಮವರೇ ಆದ ನಿರ್ದೇಶಕ ಜೀವನ್‌ರಾಮ್ ಸುಳ್ಯ ಅವರು ಕೈಜೋಡಿಸಿದ್ದರಿಂದ ಅರೆಭಾಷೆ ನಾಟಕವು ರಾಜ್ಯದ ಬೇರೆ ಬೇರೆ ಕಡೆಗಳಲ್ಲಿ ಪ್ರದರ್ಶನ ಕಾಣಲು ಸಾಧ್ಯವಾಗುತ್ತಿದೆ' ಎಂದರು.

ಅಧ್ಯಕ್ಷತೆಯನ್ನು ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನದ ಕಾರ್ಯನಿರ್ವಹಣಾಧಿಕಾರಿ ನಿಂಗಯ್ಯ ಅವರು ವಹಿಸಿದ್ದರು. ಅಕಾಡೆಮಿ ಸದಸ್ಯರಾದ ಜಯಪ್ರಕಾಶ್ ಮೋಂಟಡ್ಕ, ಪುರುಷೋತ್ತಮ ಕರಂಗಲ್ಲು, ಕುಸುಮಾಧರ, ನಾಟಕ ನಿರ್ದೇಶಕ ಜೀವನ್‌ರಾಮ್ ಸುಳ್ಯ, ಕುಸುಮಸಾರಂಗ ಸಂಚಾಲಕ ಡಾ.ಗೋವಿಂದ ಎನ್.ಎಸ್. ವೇದಿಕೆಯಲ್ಲಿ ಉಪಸ್ಥಿತರಿದ್ದರು.



ಸುಬ್ರಹ್ಮಣ್ಯದಲ್ಲಿ ಗುರುವಾರ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಯಿಂದ 'ಸಾಹೇಬ್ರು ಬಂದವೇ' ನಾಟಕ ಪ್ರದರ್ಶನದ ಸನ್ನಿವೇಶ

#### 'ಕಲಾವಿದ ಸೋನಾಗೆ ಅರ್ಪಣೆ'

ಸಾಹೇಬ್ರು ಬಂದವೇ ನಾಟಕ ಪ್ರದರ್ಶನವನ್ನು ಕುಸುಮ ಸಾರಂಗದ ಕಲಾವಿದ ಮೋಹನ್ ಸೋನಾ ಅವರಿಗೆ ಅರ್ಪಣೆ ಮಾಡಲಾಯಿತು. ನಿವೃತ್ತ ದೈಹಿಕ ಶಿಕ್ಷಣ ನಿರ್ದೇಶಕ ತುಕರಾಮ್ ಏನೆಕಲ್ಲು ಅವರು ಮೋಹನ್ ಸೋನಾರ ಭಾವಚಿತ್ರಕ್ಕೆ ಪುಷ್ಪಾರ್ಚನೆ ಮಾಡಿದರು. ಕುಸುಮಾ ಸಾರಂಗ ಪದಾಧಿಕಾರಿಗಳು, ವಿದ್ಯಾರ್ಥಿ ನಾಯಕರು ಉಪಸ್ಥಿತರಿದ್ದರು.

ನಾಟಕವನ್ನು ಅನುವಾದಿಸಿದ್ದ ಜಯಪ್ರಕಾಶ್ ಕುಕ್ಕೆಟ್ಟಿ ಇದ್ದರು. ಸಂಸ್ಥೆಯ ಪ್ರಾಂಶುಪಾಲ ಪ್ರೊ.ಉದಯಕುಮಾರ್ ಕೆ. ಸ್ವಾಗತಿಸಿ, ಕೆಎಸ್‌ಎಸ್ ಕಾಲೇಜಿನ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಘಟಕದ ಸುಮಿತ್ರ ವಂದಿಸಿದರು. ಉಪನ್ಯಾಸಕಿ ಪುಷ್ಪಾ ಕಾರ್ಯಕ್ರಮ ನಿರೂಪಿಸಿದರು.





**ಕೆ.ಎಸ್.ಎಸ್ ಕಾಲೇಜು ಸುಬ್ರಹ್ಮಣ್ಯ**

**ತಾ. : 14–01–2021**



### ಭಾಷೆ ನಾಶವಾದರೆ, ಜನಾಂಗ ನಾಶ: ಕಾರ್ಯಪ್ಪ

ರಂಗಾಯಣದ ಭೂಮಿಗೀತದಲ್ಲಿ ಅರೆಭಾಷೆಯ ನಾಟಕ 'ಸಾಹೇಬ್ರು ಬಂದವೇ' ಪ್ರದರ್ಶನ

ಪ್ರಜಾವಾಣಿ ವಾರ್ತೆ

ಮೈಸೂರು: 'ಒಂದು ಭಾಷೆ ನಾಶವಾದರೆ ಆ ಭಾಷೆಯನ್ನಾಡುವ ಜನಾಂಗವೂ ನಾಶವಾದಂತೆ' ಎಂದು ರಂಗಾಯಣದ ನಿರ್ದೇಶಕ ಅಡ್ಡಂಡ ಸಿ. ಕಾರ್ಯಪ್ಪ ಹೇಳಿದರು.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಯಿಂದ ರಂಗಾಯಣದ ಭೂಮಿಗೀತದಲ್ಲಿ ಶುಕ್ರವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಒಂದು ಜನಾಂಗವನ್ನು ನಾಶ ಮಾಡಬೇಕಾದರೆ ಹೆಚ್ಚು ಕಷ್ಟಪಡಬೇಕಿಲ್ಲ. ಆ ಜನಾಂಗದವರು ಆಡುವ ಭಾಷೆಯನ್ನು ಬಿಟ್ಟುಬಿಟ್ಟರೆ ಸಾಕು. ಅರೆಭಾಷೆ ಮಾತನಾಡುವುದನ್ನು ಬಿಟ್ಟರೆ ಅರೆಭಾಷೆ ಗೌಡರು ಇರುವುದಿಲ್ಲ. ಕೊಡವ ಭಾಷೆ ಮಾತನಾಡುವುದನ್ನು ನಿಲ್ಲಿಸಿದರೆ ಕೊಡವರು ಇರುವುದಿಲ್ಲ. ಕನ್ನಡ ಮಾತನಾಡುವುದು ಬಿಟ್ಟರೆ ಕನ್ನಡಿಗರೇ ಇರುವುದಿಲ್ಲ ಎಂದು ತಿಳಿಸಿದರು.

'ಕನ್ನಡ ಭಾಷೆಯನ್ನೇ ಉಳಿಸಲು ನಾವು ಹೋರಾಟ ನಡೆಸಬೇಕಾಗಿದೆ. ಅಂತಹ ಪರಿಸ್ಥಿತಿಯಲ್ಲಿ ಕನ್ನಡದೊಳಗೆ ಇರುವ ಕೊಡವ, ತುಳು, ಕೊಂಕಣಿ, ಬ್ಯಾರಿ ಮತ್ತು ಈ ಅರೆಭಾಷೆಯ ಉಳಿವಿಗೆ ಎಷ್ಟು ಕಷ್ಟಪಡಬೇಕು ಎಂಬುದನ್ನೊಮ್ಮೆ ಯೋಚಿಸಿ' ಎಂದರು.

ಕೊಡವರು ಮತ್ತು ಅರೆಭಾಷೆ ಗೌಡರು ಅಣ್ಣತಮ್ಮಂದಿರು. ಈ ಎರಡೂ ಜನಾಂಗ ಈ ರಾಜ್ಯ ಹಾಗೂ ದೇಶಕ್ಕೆ ಮಹಾನ್ ಕೊಡುಗೆಗಳನ್ನು ಕೊಟ್ಟಿದೆ ಎಂದು ತಿಳಿಸಿದರು.

'ರಂಗಾಯಣದಲ್ಲಿ ದೇಶ ವಿದೇಶಗಳ, ಬೇರೆ ಬೇರೆ ರಾಜ್ಯಗಳ ನೂರಾರು ನಾಟಕಗಳು ಪ್ರದರ್ಶನಗೊಂಡಿವೆ. ವಿದೇಶದ ನಿರ್ದೇಶಕರು ಬಂದು ನಮ್ಮ ರಂಗ ತಂಡದೊಂದಿಗೆ ಕೆಲಸ ಮಾಡಿದ್ದಾರೆ. ಅಂತಹ ಜಾಗದಲ್ಲಿ ಅರೆಭಾಷೆಯ ನಾಟಕ ಪ್ರದರ್ಶನ ಕಾಣುತ್ತಿರುವುದು' ಅತೀವ ಸಂತಸ ಉಂಟುಮಾಡಿದೆ ಎಂದರು.

'ಇಲ್ಲಿ ಅರೆಭಾಷೆಯ ನಾಟಕ ನೋಡಲು ನೀವು ಹೆಚ್ಚಿನ ಸಂಖ್ಯೆಯಲ್ಲಿ ಬಂದಿದ್ದೀರಿ. ನಾಳೆ ಇನ್ನೊಂದು ಭಾಷೆಯ ನಾಟಕ ಪ್ರದರ್ಶನವಾದರೆ ಅದನ್ನು ನೋಡಲು ಬರಬೇಕು. ಇಲ್ಲದಿದ್ದರೆ ನಾವು ಭಾಷಾಂಧರು, ಕೋಮುವಾದಿಗಳು ಆಗಿ ಬಿಡುತ್ತೇವೆ. ನಾಳೆ ಕೊಡವ, ತುಳು ಅಥವಾ ಕನ್ನಡ ನಾಟಕ ಪ್ರದರ್ಶನಗೊಂಡರೆ ಅದನ್ನೂ ವೀಕ್ಷಿಸಬೇಕು' ಎಂದು ಹೇಳಿದರು.

ವಿರಾಜಪೇಟೆ ಕ್ಷೇತ್ರದ ಶಾಸಕ ಕೆ.ಜಿ. ಬೋಪಯ್ಯ, ಕೊಡಗು ಗೌಡ ಸಮಾಜದ ಅಧ್ಯಕ್ಷ ತೋಟಂಬೈಲು ಮನೋಹರ, ಕರ್ನಾಟಕ ಅರೆಭಾಷೆ ಸಂಸ್ಕೃತಿ- ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಲಕ್ಷ್ಮಿನಾರಾಯಣ ಕಜೆಗದ್ದೆ, ರಂಗನಿರ್ದೇಶಕ ಜೀವನ್‌ರಾಂ ಸುಳ್ಯ, ರಂಗಾಯಣದ ಜಂಟಿ ನಿರ್ದೇಶಕ ವಿ.ಎನ್. ಮಲ್ಲಿಕಾರ್ಜುನಸ್ವಾಮಿ ಪಾಲ್ಗೊಂಡಿದ್ದರು.







ರಂಗಾಯಣದ ಭೂಮಿಗೀತ ಸಭಾಂಗಣದಲ್ಲಿ ಶುಕ್ರವಾರ ಅರೆಭಾಷೆ ನಾಟಕ 'ಸಾಹೇಬ್ರು ಬಂದವೇ' ಪ್ರದರ್ಶಿಸಲಾಯಿತು (ಎಡಚಿತ್ರ). ನಾಟಕ ಪ್ರದರ್ಶನಕ್ಕೂ ಮುನ್ನ ನಡೆದ ವೇದಿಕೆ ಕಾರ್ಯಕ್ರಮದಲ್ಲಿ ಅಡ್ಡಂಡ ಸಿ.ಕಾರ್ಯಪ್ಪ, ಕೆ.ಜಿ.ಬೋಪಯ್ಯ, ತೋಟಂಬೈಲು ಮನೋಹರ, ಲಕ್ಷ್ಮಿನಾರಾಯಣ ಕಜೆಗದ್ದೆ, ಜೀವನ್‌ರಾಂ ಸುಳ್ಯ, ವಿ.ಎನ್. ಮಲ್ಲಿಕಾರ್ಜುನಸ್ವಾಮಿ ಪಾಲ್ಗೊಂಡಿದ್ದರು

**ಮುಖ್ಯಾಂಶಗಳು**
- ಜೀವನ್‌ರಾಂ ಸುಳ್ಯ ನಿರ್ದೇಶಿಸಿದ ನಾಟಕ
- ಕಾರ್ಯಕ್ರಮದಲ್ಲಿ ಶಾಸಕ ಕೆ.ಜಿ.ಬೋಪಯ್ಯ ಭಾಗಿ
- ಎಲ್ಲ ಭಾಷೆಗಳ ನಾಟಕವನ್ನು ಪ್ರೋತ್ಸಾಹಿಸಲು ಸಲಹೆ

#### ನಾಟಕ ಪ್ರದರ್ಶನ

ಜೀವನ್‌ರಾಂ ಸುಳ್ಯ ನಿರ್ದೇಶನದ ಅರೆಭಾಷೆ ನಾಟಕ 'ಸಾಹೇಬ್ರು ಬಂದವೇ' ಪ್ರದರ್ಶಿಸಲಾಯಿತು. ಈ ನಾಟಕದ ಮೂಲ- ನಿಕೋಲಾಯ್ ಗೊಗಲ್‌ನ 'ದಿ ಇನ್‌ಸ್ಪೆಕ್ಟರ್ ಜನರಲ್' ಆಗಿದ್ದು, ಕೆ.ವಿ.ಸುಬ್ಬಣ್ಣ, ಕೆ.ವಿ.ಅಕ್ಷರ ಅವರು ಕನ್ನಡಕ್ಕೆ ತಂದಿದ್ದಾರೆ. ಜಯಪ್ರಕಾಶ್ ಕುಕ್ಕೇಟಿ ಅವರು ಅರೆಭಾಷೆಗೆ ಅಳವಡಿಸಿದ್ದಾರೆ.





**ರಂಗಾಯಣ ಮೈಸೂರು**

